ಟೆಂಡರ್ ನಮೂನೆಯನ್ನು ದಿನಾಂಕ:23.08.2007 ಮತ್ತು 31.08.2007 ರಂದು 1.00 ಗಂಟೆವರೆಗೆ ಕಛೇರಿ ವೇಳೆಯಲ್ಲಿ ನೀಡಲಾಗುವುದು. ಒಂದು ಟೆಂಡರ್ ಫಾರಂನ ಬೆಲೆ ರೂ.200.00 (ತೆರಿಗೆ ಪ್ರತ್ಯೇಕ). ಒಂದೊಂದು ಕೆಲಸಕ್ಕೆ ಸಂಚಕಾರ ಟಿಪ್ಪಣಿಯನ್ನು ಡಿಡಿ ರೂಪದಲ್ಲಿ ಷೆಡ್ಯೂಲ್ ಕಾಲಂ ಸಂಖ್ಯೆ: 7 ರಲ್ಲಿರುವಂತೆ ಪ್ರತ್ಯೇಕವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಟೆಂಡರ್ ನಡೆಯಬಹುದಾದ ಸಂದರ್ಭದಲ್ಲಿ ಟೆಂಡರ್ ನಮೂನೆಗಳನ್ನು ಆಯಾ ದಿನಾಂಕದಂದು 1.00 ಗಂಟೆಯವರೆಗೆ ಪಡೆಯಬಹುದು.

1. ಟೆಂಡರ್ ಫಾರಂಗಳನ್ನು ಪ್ರತಿ ಫಾರಂಗೆ ರೂ.200.00 (ತೆರಿಗೆ ಪ್ರತ್ಯೇಕ) ಪಾವತಿ ಮಾಡಿ ದಿನಾಂಕ: ಮತ್ತು ಕಛೇರಿ ಕೆಲಸದ ವೇಳೆಯಲ್ಲಿ 1.00 ಗಂಟೆಯವರೆಗೆ ಪಡೆಯತಕ್ಕದ್ದು. ಮತ್ತು ಇಚ್ಛೆಯುಳ್ಳವರು ಈ ವಿಭಾಗದಲ್ಲಿ 2007–08ನೇ ಸಾಲಿಗೆ ತಮ್ಮ ಹೆಸರನ್ನು ನೊಂದಾಯಿಸಿಕೊಂಡಿರಬೇಕು.
2. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಕೆಲಸವಾರು ಮೊಹರು ಮಾಡಿ ಸಲ್ಲಿಸುವುದು.
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ:08.2007 ರಂದು ಸಂಜೆ.3 .00 ಗಂಟೆಯವರೆಗೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಬಳಕೆ, ಬೆಂಗಳೂರು ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಮತ್ತು ಮೇಲ್ಕಂಡ ದಿನಾಂಕದಂದು ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನಃ ದಿನಾಂಕ:31.08.2007 ಸಂಜೆ 3.00 ಗಂಟೆಗೆ ಎರಡನೇ ಬಾರಿಗೆ ನೊಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿ ಸಲ್ಲಿಸುವ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕ ಪ್ರಕಟಣೆ ಹೊರಡಿಸುವುದಿಲ್ಲ.
4. ಈ ಅರಣ್ಯ ಕಾಮಗಾರಿಗಳು ಕಾಲಬದ್ಧ ಕೆಲಸಗಳಾಗಿದ್ದು, ಈ ಎಲ್ಲಾ ಕೆಲಸಗಳನ್ನು ಋತುಮಾನಕ್ಕೆ ಅನುಗುಣವಾಗಿ (ಕಾಲಬದ್ಧ) ಆಯಾ ವಲಯ ಅರಣ್ಯಾಧಿಕಾರಿಗಳ ನಿರ್ದೇಶನ ಮತ್ತು ಮೇಲಾಧಿಕಾರಿಗಳ ನಿರ್ದೇಶನದಂತೆಯೂ ಜಾರಿಗೊಳಿಸಲು ಬದ್ಧರಾಗಿರಬೇಕು. ಮೇಲಿನ ಕೆಲಸಗಳನ್ನು ಕಾಲಬದ್ಧವಾಗಿದ್ದು, ಒಂದು ಪಕ್ಷ ಯಾವುದಾದರೂ ವಲಯದಲ್ಲಿ ಟೆಂಡರ್‌ಗೆ ಮುಂಚೆ ಕೆಲಸಗಳನ್ನು ಕೈಗೊಂಡಿದ್ದ ಪಕ್ಷದಲ್ಲಿ ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳು ಈ ಪ್ರಕಟಣೆಯಿಂದ ಹೊರತುಪಡಿಸಿದವುಗಳಾಗಿರುತ್ತವೆ ಮತ್ತು ಸ್ಥಳ ಬದಲಾವಣೆಯಾದರೂ ಸಹ ಕೆಲಸಗಳನ್ನು ಗುರುತುಪಡಿಸಿಕೊಟ್ಟು ಸ್ಥಳದಲ್ಲಿ ಪೂರ್ಣಗೊಳಿಸಬೇಕಾಗುತ್ತದೆ.
5. ಪ್ರತಿ ಟೆಂಡರ್‌ದಾರರು ಈ ಕಾಮಗಾರಿಯನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವಾಹನಗಳ ವ್ಯವಸ್ಥೆಯನ್ನು ಸ್ವತಂತ್ರವಾಗಿ ಮಾಡಿಕೊಳ್ಳಬೇಕು.
6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಛಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗದಿಪಡಿಸಿರುವ ಇ.ಎಂ.ಡಿ. ಮೊತ್ತಕ್ಕೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಬಳಕೆ, ಬೆಂಗಳೂರು ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಡಿ.ಡಿ. ರೂಪದಲ್ಲಿ ಪಡೆದು ಪಾವತಿಸಬೇಕಾಗಿರುತ್ತದೆ.
7. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅವುಗಳನ್ನು ತಿರಸ್ಕರಿಸಲಾಗುವುದು ಮತ್ತು ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಭವವಾದಲ್ಲಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಬಳಕೆ, ಬೆಂಗಳೂರು ರವರ ತೀರ್ಮಾನವೇ ಅಂತಿಮವಾಗಿರುತ್ತದೆ.
8. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸುವುದಿಲ್ಲ.
9. ಯಾವುದೇ ಕಾರಣಗಳನ್ನು ನೀಡದೇ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಬಳಕೆ, ಬೆಂಗಳೂರು ಇವರು ಕಾಯ್ದಿರಿಸಿಕೊಂಡಿರುತ್ತಾರೆ.
10. ಈ ಮೇಲಿನ ಕಾಮಗಾರಿ ಅನುಷ್ಠಾನ ಸಂಬಂಧ ಹಣ ಪಾವತಿಸುವುದು ಆಯಾ ಯೋಜನೆಗಳಡಿ ಬಿಡುಗಡೆಗೊಳಿಸುವ ಅನುದಾನ ಹಾಗೂ ಅನುಮೋದನೆಯ ನಿಬಂಧನೆಗಳಿಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣಕ್ಕೆ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
11. ಎಲ್ಲಾ ಕೆಲಸಗಳು ಆಗಿಂದಾಗ್ಗೆ, ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ಸಹಾಯಕ ಅರಣ್ಯ ಕೃಷಿಕರುಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಕ್ಷೇತ್ರ ಟಿಪ್ಪಣಿ ಪುಸ್ತಕದೊಂದಿಗೆ (ಎಫ್.ಎನ್.ಬಿ.: ಎಂ.ಬಿ.) ಒಪ್ಪಿಸಬೇಕಾಗುತ್ತದೆ. ಮತ್ತು ಬಿಲ್ ಹಣ ಸಂದಾಯ ಮಾಡುವಾಗ ಬಿಲ್‌ಗಳಲ್ಲಿ ನಿಯಮದಂತೆ ಆದಾಯ ತೆರಿಗೆ ಮತ್ತು ಮಾರಾಟ ತೆರಿಗೆಯನ್ನು ಕಡಿತಗೊಳಿಸಲಾಗುವುದು. ಮತ್ತು ಆಗಿಂದಾಗ್ಗೆ ತೆರಿಗೆಗಳು ವ್ಯತ್ಯಾಸವಾದರೂ ಸಹ ನಿಯಮದಂತೆ ಕಡಿತಗೊಳಿಸಲಾಗುವುದು.
12. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳು/ ಸಂಶೋಧನಾ ಪ್ಲಾಟುಗಳನ್ನು ಹಾಳು ಮಾಡಿದ್ದಲ್ಲಿ, ಗಿಡ, ಮರಗಳನ್ನು ಕಡಿದು ನಾಶಪಡಿಸಿದ್ದಲ್ಲಿ ಸರ್ಕಾರಕ್ಕೆ ಆದ ನಷ್ಟವನ್ನು ಸಂಬಂಧಪಟ್ಟ ಗುತ್ತಿಗೆದಾರರಿಂದ ವಸೂಲು ಮಾಡಲಾಗುವುದು/ ಬಿಲ್ಲುಗಳಲ್ಲಿ ಕಟಾವು ಮಾಡಲಾಗುವುದು ಮತ್ತು ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿಯ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.

13. ಟೆಂಡರ್‌ನಲ್ಲಿ ಭಾಗವಹಿಸಲಿಚ್ಚಿಸುವ ಗುತ್ತಿಗೆದಾರರು "ಕರ್ನಾಟಕ ಸಾರ್ವಜನಿಕ ಸಂಗ್ರಹಣದಲ್ಲಿ ಪಾರದರ್ಶಕತೆ ಕಾಯ್ದೆ 1999 ಕಾಲಂ 27(1) (ಎ) ದಂತೆ ಮೇಲೆ ನಮೂದಿಸಿದ ರೀತಿಯ ಕೆಲಸಗಳನ್ನು ಕರ್ನಾಟಕ ಅರಣ್ಯ ಇಲಾಖೆಯ ಯಾವುದೇ ವಿಭಾಗದಲ್ಲಿ ಕನಿಷ್ಟ ಒಂದು ವರ್ಷ ಸಮರ್ಪಕವಾಗಿ ನಿರ್ವಹಿಸಿದ ಅನುಭವ ಹೊಂದಿರಬೇಕು. ಹಾಗೂ ಈ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಂದ ದೃಢೀಕೃತ ಪ್ರಮಾಣ ಪತ್ರಗಳನ್ನು ಒದಗಿಸಬೇಕು.
14. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಡೀಫಾಲ್ಟರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.
15. ಈ ಮೇಲಿನ ಕಾಮಗಾರಿಗಳು ಅನುದಾನ ಲಭ್ಯತೆಯ ಮೇಲೆ ಕೈಗೊಳ್ಳಬೇಕಾಗಿರುತ್ತದೆ. ಒಂದು ವೇಳೆ ಸರ್ಕಾರದಿಂದ ಅನುದಾನ ಬಿಡುಗಡೆಯಾಗುವುದು ತಡವಾದಲ್ಲಿ, ಇಲಾಖೆಯಿಂದ ಯಾವುದೇ ಬಡ್ಡಿಯನ್ನು ನೀಡಲಾಗುವುದಿಲ್ಲ.

ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು,
ಅರಣ್ಯ ಬಳಕೆ, ಬೆಂಗಳೂರು.

ಪಿ.ಆರ್.480

**FORM-IV**

**(See Rule 12)**

**NOTICE**

It is hereby notified that the Undersigned has changed his Name from **RAMAPPA YANKAPPA BARGI** to **RAMESH YANKAPPA BARGI.**

PD-130 **RAMAPPA YANKAPPA BARGI**

**ಅಧ್ಯಕ್ಷರು, ನೇಮಕಾತಿ ಸಮಿತಿ, ಪೊಲೀಸ್ ಇಲಾಖೆ**

**ತಿದ್ದುಪಡಿ**

**ಅಧಿಸೂಚನೆ ಸಂಖ್ಯೆ: 26/ ನೇಮಕಾತಿ/ 2007–08, ದಿನಾಂಕ:1ನೇ ಆಗಸ್ಟ್, 2007**

**ಪೊಲೀಸ್ ಪೇದೆ ನೇಮಕಾತಿ–2007**

**ವಿಷಯ:** ನಾಗರಿಕ ಪೊಲೀಸ್ ಪೇದೆ ಮತ್ತು ಮಹಿಳಾ ಪೊಲೀಸ್ ಪೇದೆ ಹುದ್ದೆಗಳಿಗೆ ನೇಮಕಾತಿ ಕುರಿತು.

**ಉಲ್ಲೇಖ:** ಅಧಿಸೂಚನೆ ಸಂಖ್ಯೆ: 26/ ನೇಮಕಾತಿ/ 2007–08, ದಿನಾಂಕ:10ನೇ ಜುಲೈ, 2007.

ಕರ್ನಾಟಕ ರಾಜ್ಯಪತ್ರದಲ್ಲಿ ನಾಗರೀಕ ಪೊಲೀಸ್ ಪೇದೆ ಮತ್ತು ಮಹಿಳಾ ಪೊಲೀಸ್ ಪೇದೆ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವ ಸಲುವಾಗಿ ದಿನಾಂಕ:10ನೇ ಜುಲೈ 2007ರಂದು ಅಧಿಸೂಚನೆ ಸಂಖ್ಯೆ: 26/ ನೇಮಕಾತಿ/ 2007–08ನ್ನು ಪ್ರಕಟಿಸಲಾಗಿರುತ್ತದೆ. ಸದರಿ ಅಧಿಸೂಚನೆಯ ಪುಟ ಸಂಖ್ಯೆ: 28ರ ದಾವಣಗೆರೆ ಜಿಲ್ಲೆ, ಪುಟ ಸಂಖ್ಯೆ: 29ರ ಧಾರವಾಡ ಜಿಲ್ಲೆ, ಪುಟ ಸಂಖ್ಯೆ: 38ರ ಕೊಪ್ಪಳ ಜಿಲ್ಲೆ ಮತ್ತು ಪುಟ ಸಂಖ್ಯೆ: 42ರ ರಾಯಚೂರು ಜಿಲ್ಲೆಯ ಖಾಲಿ ಹುದ್ದೆಗಳ ವರ್ಗೀಕರಣದಲ್ಲಿ ಕೆಲವೊಂದು ಬದಲಾವಣೆಗಳಾಗಿರುವುದರಿಂದ ಅದನ್ನು ಪರಿಶೀಲಿಸಿ ಈ ಕೆಳಗೆ ತಿಳಿಸಿರುವಂತೆ ತಿದ್ದುಪಡಿ ಮಾಡಲಾಗಿದೆ. ಈ ಕೆಳಗಿನಂತೆ ಓದಿಕೊಳ್ಳತಕ್ಕದ್ದು.

**ದಾವಣಗೆರೆ ಜಿಲ್ಲೆ:**

**ಎ) ನಾಗರಿಕ ಪೊಲೀಸ್ ಪೇದೆ ಹುದ್ದೆಗೆ– 134 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ:**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 67 | 16 | 07 | 03 | 03 | 38 |
| ಪರಿಶಿಷ್ಟ ಜಾತಿ | 20 | 05 | 02 | 01 | 01 | 11 |
| ಪರಿಶಿಷ್ಟ ಪಂಗಡ | 04 | 01 | 01 | – | – | 02 |
| ಪ್ರವರ್ಗ–1 | 05 | 01 | – | 01 | 01 | 02 |
| ಪ್ರವರ್ಗ–2ಎ | 20 | 05 | 02 | 01 | 01 | 11 |
| ಪ್ರವರ್ಗ–2ಬಿ | 05 | 02 | – | 01 | 01 | 01 |
| ಪ್ರವರ್ಗ–3ಎ | 06 | 02 | – | 01 | 01 | 02 |
| ಪ್ರವರ್ಗ–3ಬಿ | 07 | 01 | 01 | 01 | – | 04 |
| **ಒಟ್ಟು** | **134** | **33** | **13** | **09** | **08** | **71** |

ಬಿ) ಮಹಿಳಾ ಪೊಲೀಸ್ ಪೇದೆ ಹುದ್ದೆಗೆ– 22 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ:

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|
| ಸಾಮಾನ್ಯ ವರ್ಗ | 10 | 03 | – | – | 07 |
| ಪರಿಶಿಷ್ಟ ಜಾತಿ | 03 | 01 | – | 01 | 01 |
| ಪರಿಶಿಷ್ಟ ಪಂಗಡ | 01 | 01 | – | – | – |
| ಪ್ರವರ್ಗ–1 | 01 | – | – | – | 01 |
| ಪ್ರವರ್ಗ–2ಎ | 03 | 01 | – | 01 | 01 |
| ಪ್ರವರ್ಗ–2ಬಿ | 02 | 01 | – | – | 01 |
| ಪ್ರವರ್ಗ–3ಎ | 01 | – | – | – | 01 |
| ಪ್ರವರ್ಗ–3ಬಿ | 01 | – | – | – | 01 |
| **ಒಟ್ಟು** | **22** | **07** | – | **02** | **13** |

**ಧಾರವಾಡ ಜಿಲ್ಲೆ:**

ಎ) ನಾಗರಿಕ ಪೊಲೀಸ್ ಪೇದೆ ಹುದ್ದೆಗೆ– 54 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ:

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 27 | 09 | – | 02 | – | 16 |
| ಪರಿಶಿಷ್ಟ ಜಾತಿ | 08 | 02 | 01 | – | 02 | 03 |
| ಪರಿಶಿಷ್ಟ ಪಂಗಡ | 01 | – | – | – | – | 01 |
| ಪ್ರವರ್ಗ–1 | 02 | – | 02 | – | – | – |
| ಪ್ರವರ್ಗ–2ಎ | 09 | 02 | 02 | – | 01 | 04 |
| ಪ್ರವರ್ಗ–2ಬಿ | 02 | 01 | – | – | – | 01 |
| ಪ್ರವರ್ಗ–3ಎ | 02 | – | 01 | – | – | 01 |
| ಪ್ರವರ್ಗ–3ಬಿ | 03 | – | – | – | – | 03 |
| **ಒಟ್ಟು** | **54** | **14** | **06** | **02** | **03** | **29** |

ಬಿ) ಮಹಿಳಾ ಪೊಲೀಸ್ ಪೇದೆ ಹುದ್ದೆಗೆ– 12 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ:

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|
| ಸಾಮಾನ್ಯ ವರ್ಗ | 06 | 02 | – | – | 04 |
| ಪರಿಶಿಷ್ಟ ಜಾತಿ | 02 | – | – | – | 02 |
| ಪರಿಶಿಷ್ಟ ಪಂಗಡ | – | – | – | – | – |
| ಪ್ರವರ್ಗ–1 | – | – | – | – | – |
| ಪ್ರವರ್ಗ–2ಎ | 02 | – | – | – | 02 |
| ಪ್ರವರ್ಗ–2ಬಿ | – | – | – | – | – |
| ಪ್ರವರ್ಗ–3ಎ | 01 | 01 | – | – | – |
| ಪ್ರವರ್ಗ–3ಬಿ | 01 | – | – | – | 01 |
| **ಒಟ್ಟು** | **12** | **03** | – | – | **09** |

ಕೊಪ್ಪಳ ಜಿಲ್ಲೆ:

ಎ) ನಾಗರಿಕ ಪೊಲೀಸ್ ಪೇದೆ ಹುದ್ದೆಗೆ– 71 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ:

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 35 | 08 | 04 | 01 | 01 | 21 |
| ಪರಿಶಿಷ್ಟ ಜಾತಿ | 11 | 02 | 01 | 01 | 01 | 06 |
| ಪರಿಶಿಷ್ಟ ಪಂಗಡ | 02 | – | – | – | – | 02 |
| ಪ್ರವರ್ಗ–1 | 03 | 01 | – | – | – | 02 |
| ಪ್ರವರ್ಗ–2ಎ | 10 | 02 | 01 | 01 | 01 | 05 |
| ಪ್ರವರ್ಗ–2ಬಿ | 03 | 01 | – | – | – | 02 |
| ಪ್ರವರ್ಗ–3ಎ | 03 | 01 | – | – | – | 02 |
| ಪ್ರವರ್ಗ–3ಬಿ | 04 | 01 | – | – | – | 03 |
| **ಒಟ್ಟು** | **71** | **16** | **06** | **03** | **03** | **43** |

ಬಿ) ಮಹಿಳಾ ಪೊಲೀಸ್ ಪೇದೆ ಹುದ್ದೆಗೆ– 13 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ:

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|
| ಸಾಮಾನ್ಯ ವರ್ಗ | 05 | 02 | – | – | 03 |
| ಪರಿಶಿಷ್ಟ ಜಾತಿ | 02 | – | – | – | 02 |
| ಪರಿಶಿಷ್ಟ ಪಂಗಡ | – | – | – | – | – |
| ಪ್ರವರ್ಗ–1 | – | – | – | – | – |
| ಪ್ರವರ್ಗ–2ಎ | 03 | 01 | – | – | 02 |
| ಪ್ರವರ್ಗ–2ಬಿ | 01 | – | – | – | 01 |
| ಪ್ರವರ್ಗ–3ಎ | 01 | – | – | – | 01 |
| ಪ್ರವರ್ಗ–3ಬಿ | 01 | – | – | – | 01 |
| **ಒಟ್ಟು** | **13** | **03** | – | – | **10** |

ರಾಯಚೂರು ಜಿಲ್ಲೆ:

ಎ) ನಾಗರಿಕ ಪೊಲೀಸ್ ಪೇದೆ ಹುದ್ದೆಗೆ– 89 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ:

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 43 | 11 | 04 | 02 | 03 | 23 |
| ಪರಿಶಿಷ್ಟ ಜಾತಿ | 14 | 03 | 01 | 01 | – | 09 |
| ಪರಿಶಿಷ್ಟ ಪಂಗಡ | 03 | 01 | 01 | – | – | 01 |
| ಪ್ರವರ್ಗ–1 | 04 | 01 | 01 | – | – | 02 |
| ಪ್ರವರ್ಗ–2ಎ | 14 | 03 | 01 | 01 | – | 09 |
| ಪ್ರವರ್ಗ–2ಬಿ | 04 | 01 | 01 | – | – | 02 |
| ಪ್ರವರ್ಗ–3ಎ | 03 | – | 01 | – | – | 02 |
| ಪ್ರವರ್ಗ–3ಬಿ | 04 | 01 | – | – | 01 | 02 |
| **ಒಟ್ಟು** | **89** | **21** | **10** | **04** | **04** | **50** |

**ಬಿ) ಮಹಿಳಾ ಪೊಲೀಸ್ ಪೇದೆ ಹುದ್ದೆಗೆ– 16 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಗಿನಂತಿದೆ:**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|
| ಸಾಮಾನ್ಯ ವರ್ಗ | 08 | 03 | – | – | 05 |
| ಪರಿಶಿಷ್ಟ ಜಾತಿ | 02 | – | – | – | 02 |
| ಪರಿಶಿಷ್ಟ ಪಂಗಡ | – | – | – | – | – |
| ಪ್ರವರ್ಗ–1 | 01 | – | – | – | 01 |
| ಪ್ರವರ್ಗ–2ಎ | 03 | 01 | – | – | 02 |
| ಪ್ರವರ್ಗ–2ಬಿ | 01 | 01 | – | – | – |
| ಪ್ರವರ್ಗ–3ಎ | – | – | – | – | – |
| ಪ್ರವರ್ಗ–3ಬಿ | 01 | 01 | – | – | – |
| **ಒಟ್ಟು** | **16** | **06** | – | – | **10** |

**ವಿದ್ಯಾರ್ಹತೆಯ ಬಗ್ಗೆ ಜೆ.ಓ.ಸಿ. ಅಭ್ಯರ್ಥಿಗಳಿಗೆ ವಿಶೇಷ ಸೂಚನೆ:**

ಅಧಿಸೂಚನೆಯ ಪುಟ ಸಂಖ್ಯೆ: 2ರಲ್ಲಿ ಕಾಲಂ 3ರ ಲಿಖಿತ ಪರೀಕ್ಷೆಯ ಟಿಪ್ಪಣಿಯಲ್ಲಿ ನಾಗರಿಕ ಪೊಲೀಸ್ ಪೇದೆ ಮತ್ತು ಮಹಿಳಾ ಪೊಲೀಸ್ ಪೇದೆ ಹುದ್ದೆಗಳಿಗೆ ವೃತ್ತಿ ತರಬೇತಿ ಇಲಾಖೆಯು ನಡೆಸುವ ಜೆ.ಓ.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವ ಅಭ್ಯರ್ಥಿಗಳು ಅರ್ಜಿಯಲ್ಲಿ ಅಂಕಗಳ ಮಾಹಿತಿಯನ್ನು ಸಲ್ಲಿಸುವ ಬಗ್ಗೆ ಕಂಡಿಕೆ–1ನ್ನು ಭಾಗಶಃ ತಿದ್ದುಪಡಿ ಮಾಡಲಾಗಿದೆ ಮತ್ತು ಕಂಡಿಕೆ–3ನ್ನು ಸೇರ್ಪಡೆ ಮಾಡಲಾಗಿದೆ. ಈ ಮಾರ್ಪಟಿನಂತೆ ಅರ್ಜಿಯನ್ನು ತುಂಬತಕ್ಕದ್ದು.

**ಕಂಡಿಕೆ–1ಕ್ಕೆ ಮುಂಚಿತವಾಗಿ ಈ ಸಾಲುಗಳನ್ನು ಓದಿಕೊಳ್ಳತಕ್ಕದ್ದು**–"ಶೈಕ್ಷಣಿಕ ವರ್ಷ 2004–05ಕ್ಕೆ ಮುಂಚಿತವಾಗಿ ಮಂಡಳಿಯು ನಡೆಸಿದ 2ನೇ ಸೆಮಿಸ್ಟರ್ ಮತ್ತು 4ನೇ ಸೆಮಿಸ್ಟರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಲ್ಲಿ ಅಭ್ಯರ್ಥಿಗಳು ಅರ್ಜಿಯನ್ನು ತುಂಬುವ ವಿಧಾನ..................

**ಶೈಕ್ಷಣಿಕ ವರ್ಷ 2004–05 ರಿಂದ 2ನೇ ಸೆಮಿಸ್ಟರ್ ಪರೀಕ್ಷೆಯನ್ನು ಕಾಲೇಜು ಮಟ್ಟದಲ್ಲಿ ಹಾಗೂ 4ನೇ ಸೆಮಿಸ್ಟರ್ ಪರೀಕ್ಷೆಯನ್ನು ಮಂಡಳಿಯ ಮಟ್ಟದಲ್ಲಿ ನಡೆಸಲಾಗುತ್ತಿರುವುದರಿಂದ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಅರ್ಜಿಯನ್ನು ತುಂಬುವ ವಿಧಾನದ ಬಗ್ಗೆ ಕಂಡಿಕೆ–3ನ್ನು ಸೇರ್ಪಡೆ ಮಾಡಲಾಗಿದೆ.**

(3) ಶೈಕ್ಷಣಿಕ ವರ್ಷ 2004–05 ರಿಂದ 2ನೇ ಸೆಮಿಸ್ಟರ್ ಪರೀಕ್ಷೆಯು ಕಾಲೇಜು ಮಟ್ಟದಲ್ಲಿ ಹಾಗೂ 4ನೇ ಸೆಮಿಸ್ಟರ್ ಪರೀಕ್ಷೆಯು ಮಂಡಳಿ ಮಟ್ಟದಲ್ಲಿ ನಡೆಸುತ್ತಿರುವುದರಿಂದ ಅಭ್ಯರ್ಥಿಗಳು ಅರ್ಜಿಯನ್ನು ತುಂಬುವ ವಿಧಾನ, ವೃತ್ತಿ ತರಬೇತಿ ಇಲಾಖೆಯು ನಡೆಸುವ 4ನೇ ಸೆಮಿಸ್ಟರ್ ಕೋರ್ಸ್‌ನಲ್ಲಿ ತೇರ್ಗಡೆಯಾದ ಅಭ್ಯರ್ಥಿಯು ಮಂಡಳಿಯು ನಡೆಸಿದ 4ನೇ ಸೆಮಿಸ್ಟರ್ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳನ್ನು ಶ್ರೇಣಿಯ (Ranking) ಲೆಕ್ಕಕ್ಕೆ ತೆಗೆದುಕೊಳ್ಳಲಾಗುವುದು. ಒಂದು ವೇಳೆ ಜೆ.ಓ.ಸಿ. ಅಭ್ಯರ್ಥಿಗಳಿಗೆ ಎರಡು ಭಾಷೆಗಳಲ್ಲಿ ವಿನಾಯಿತಿಯನ್ನು ನೀಡಲಾಗಿದ್ದಲ್ಲಿ, 4ನೇ ಸೆಮಿಸ್ಟರ್‌ನ ಜೊತೆಗೆ ಪಿ.ಯು.ಸಿ. ಪರೀಕ್ಷೆಯ ಎರಡು ಭಾಷೆಯ ಅಂಕಗಳನ್ನು ಪರಿಗಣಿಸಲಾಗುವುದು.

ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್
ಪೊಲೀಸ್, (ತರಬೇತಿ ಮತ್ತು ನೇಮಕಾತಿ)
ಹಾಗೂ ಸಮನ್ವಯಾಧಿಕಾರಿ,
ಪಿ.ಸಿ. ನೇಮಕಾತಿ, ಕಾರ್ಲಟನ್ ಭವನ,
ಅರಮನೆ ರಸ್ತೆ, ಬೆಂಗಳೂರು–560 001.

ಪಿ.ಆರ್.475

**ಕರ್ನಾಟಕ ಸರ್ಕಾರ**

**ಪೊಲೀಸ್ ಇಲಾಖೆ**

**INDIA RESERVE BATTALLION - I**

**ಇಂಡಿಯಾ ರಿಸರ್ವ್ ಬೆಟಾಲಿಯನ್ - I**

**ಅಧಿಸೂಚನೆ ಸಂಖ್ಯೆ. 25/ನೇಮಕಾತಿ/2007–08, ದಿನಾಂಕ:8ನೇ ಆಗಸ್ಟ್ 2007**

**ವಿಷಯ:** ಇಂಡಿಯಾ ರಿಸರ್ವ್ ಬೆಟಾಲಿಯನ್ ಪೊಲೀಸ್ ಪೇದೆ ಹುದ್ದೆಗಳಿಗೆ ನೇರ ನೇಮಕಾತಿ ಕುರಿತು.

1. ಕರ್ನಾಟಕ ರಾಜ್ಯದ, ಪೊಲೀಸ್ ಇಲಾಖೆಯ ಕೆ.ಎಸ್.ಆರ್.ಪಿ. ಘಟಕವು ಸದ್ಯ ಕೊಪ್ಪಳ ಜಿಲ್ಲೆ, ಮುನೀರಾಬಾದ್ ಕೇಂದ್ರಸ್ಥಾನವಿರುವ ಇಂಡಿಯಾ ರಿಸರ್ವ್ ಬೆಟಾಲಿಯನ್ ಪೊಲೀಸ್ ಪೇದೆ ಹುದ್ದೆಗಳಿಗೆ ನೇಮಕಾತಿಗಾಗಿ ಕರ್ನಾಟಕ ರಾಜ್ಯ ಮೀಸಲು ಪೊಲೀಸ್ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು 2004ರ ಅನ್ವಯ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿದೆ. ಅಭ್ಯರ್ಥಿಗಳು ನಿಗದಿತ ಅರ್ಜಿ ಶುಲ್ಕ ರೂ.50/– (ಐವತ್ತು ರೂಪಾಯಿ ಮಾತ್ರ) ಗಳನ್ನು ನಗದು

ನೀಡಿ ರಾಜ್ಯದ ಕೆಲವು ಜಿಲ್ಲಾ ಕೇಂದ್ರ ಕಛೇರಿಗಳನ್ನೊಳಗೊಂಡಂತೆ (ಪುಟ–3ನ್ನು ನೋಡಿ) ಪೊಲೀಸ್ ಸೂಪರಿಂಟೆಂಡೆಂಟ್ ಕಛೇರಿಗಳಲ್ಲಿ ಈ ಕೆಳಗೆ ನಮೂದಿಸಿರುವ ದಿನಾಂಕಗಳಂದು ಅರ್ಜಿಗಳನ್ನು ಪಡೆಯಬಹುದು.

ಇಂಡಿಯಾ ರಿಸರ್ವ್ ಬೆಟಾಲಿಯನ್ ಪೊಲೀಸ್ ಪೇದೆ ಹುದ್ದೆಗೆ ಅಧಿಕೃತ ಅರ್ಜಿಗಳನ್ನು ದಿನಾಂಕ 20.08.2007 ರಿಂದ 31.08.2007 ರವರೆಗೆ ಬೆಳಿಗ್ಗೆ 10–00 ಗಂಟೆಯಿಂದ ಸಾಯಂಕಾಲ 5–00 ಗಂಟೆಯವರೆಗೆ ಎಲ್ಲಾ ಕೆಲಸದ ದಿನಗಳಂದು (Working Days) ಪಡೆದುಕೊಳ್ಳಬಹುದಾಗಿದೆ. ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ 31.08.2007 ರಂದು ಸಾಯಂಕಾಲ 6–00 ಗಂಟೆಯೊಳಗೆ ಅಥವಾ ಅದಕ್ಕಿಂತ ಮುಂಚಿತವಾಗಿ ಸಂಬಂಧಪಟ್ಟ ಪೊಲೀಸ್ ಸೂಪರಿಂಟೆಂಡೆಂಟ್ ಕಛೇರಿಗೆ ಖುದ್ದಾಗಿ ಸಲ್ಲಿಸತಕ್ಕದ್ದು.

**ಸೂಚನೆ:** ಕೊರಿಯರ್ / ಪೋಸ್ಟ್ ಮುಖಾಂತರ ಕಳುಹಿಸಲಾಗುವ ಅಧಿಕೃತ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಸರಿಯಾಗಿ ಭರ್ತಿ ಮಾಡಿದ ಹಾಗೂ ಖುದ್ದಾಗಿ ಕೌಂಟರ್‌ನಲ್ಲಿ ನೀಡುವ ಅರ್ಜಿಗಳನ್ನು ಮಾತ್ರ ಸ್ವೀಕರಿಸಲಾಗುವುದು.

ಇಂಡಿಯಾ ರಿಸರ್ವ್ ಬೆಟಾಲಿಯನ್ ಪೊಲೀಸ್ ಪೇದೆ ಹುದ್ದೆಗೆ ಪುರುಷ ಅಭ್ಯರ್ಥಿಗಳು ಮಾತ್ರ ಅರ್ಹರಾಗಿರುತ್ತಾರೆ. ಆಯ್ಕೆಯಾದ ಅಭ್ಯರ್ಥಿಗಳ ಬೆಟಾಲಿಯನ್‌ನ ಕೇಂದ್ರಸ್ಥಾನ ಸದ್ಯಕ್ಕೆ ಕೊಪ್ಪಳ ಜಿಲ್ಲೆಯ ಮುನೀರಾಬಾದಿನಲ್ಲಿ ಇದೆ. IRB ಯ ಪೊಲೀಸ್ ಪೇದೆಗಳು ಭಯೋತ್ಪಾದನೆ / ನಕ್ಸಲ್ ಪ್ರಭಾವಕ್ಕೆ ಒಳಗಾದ ಪ್ರದೇಶಗಳಲ್ಲಿ ಹಾಗೂ ತುರ್ತು ಸಂದರ್ಭದಲ್ಲಿ ರಾಷ್ಟ್ರದ ಯಾವುದೇ ಸ್ಥಳದಲ್ಲಿಯಾದರೂ ಕರ್ತವ್ಯ ನಿರ್ವಹಿಸಬೇಕಾಗುತ್ತದೆ.

ಅಧಿಸೂಚನೆಯನ್ವಯ ರಾಜ್ಯದ ಪೊಲೀಸ್ ಇಲಾಖೆಯಲ್ಲಿ ಇಂಡಿಯಾ ರಿಸರ್ವ್ ಬೆಟಾಲಿಯನ್ ಪೊಲೀಸ್ ಪೇದೆ ಹುದ್ದೆಗಳು ಖಾಲಿ ಇರುತ್ತದೆ. ಅಭ್ಯರ್ಥಿಗಳು ಯಾವ ಜಿಲ್ಲಾ ಪೊಲೀಸ್ ಕಛೇರಿಯಿಂದ ಅರ್ಜಿಯನ್ನು ಖರೀದಿಸಿರುತ್ತಾರೋ ಅದೇ ಕಛೇರಿಯಲ್ಲಿ ಭರ್ತಿ ಮಾಡಿದ ಅರ್ಜಿಯನ್ನು ಸಲ್ಲಿಸತಕ್ಕದ್ದು.

ಇಂಡಿಯಾ ರಿಸರ್ವ್ ಬೆಟಾಲಿಯನ್ ಪೊಲೀಸ್ ಪೇದೆ ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ: ಈ ಕೆಳಗೆ ನಮೂದಿಸಿರುವ ಖಾಲಿ ಹುದ್ದೆಗಳ ಸಂಖ್ಯೆ ತಾತ್ಕಾಲಿಕವಾಗಿದ್ದು, ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಬದಲಾವಣೆ ಮಾಡಲಾಗುವುದು.

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 350 | 88 | 35 | 17 | 18 | 192 |
| ಪರಿಶಿಷ್ಟ ಜಾತಿ | 106 | 27 | 10 | 05 | 05 | 59 |
| ಪರಿಶಿಷ್ಟ ಪಂಗಡ | 21 | 05 | 02 | 01 | 01 | 12 |
| ಪ್ರವರ್ಗ–1 | 28 | 07 | 02 | 01 | 01 | 17 |
| ಪ್ರವರ್ಗ–2ಎ | 105 | 26 | 10 | 05 | 05 | 59 |
| ಪ್ರವರ್ಗ–2ಬಿ | 28 | 07 | 02 | 01 | 01 | 17 |
| ಪ್ರವರ್ಗ–3ಎ | 28 | 07 | 02 | 01 | 01 | 17 |
| ಪ್ರವರ್ಗ–3ಬಿ | 35 | 09 | 03 | 01 | 02 | 20 |
| **ಒಟ್ಟು** | **701** | **176** | **66** | **32** | **34** | **393** |

**ಟಿಪ್ಪಣಿ:**

ಗ್ರಾಮೀಣ, ಮಾಜಿ ಸೈನಿಕರು, ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿಗಳು ಮತ್ತು ಕನ್ನಡ ಮಾಧ್ಯಮ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅಂತಹ ಖಾಲಿ ಹುದ್ದೆಗಳನ್ನು ಮೇಲೆ ನಮೂದಿಸಿರುವ ಪ್ರವರ್ಗದ ಇತರ ಅಭ್ಯರ್ಥಿಗಳಿಂದ ತುಂಬಲಾಗುವುದು.

**2. ವಯೋಮಿತಿ, ವಿದ್ಯಾರ್ಹತೆ ಮತ್ತು ವೇತನ ಶ್ರೇಣಿ :**

**(1) ವಯೋಮಿತಿ:**

ಪೊಲೀಸ್ ಪೇದೆ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು (ಅಂದರೆ 31.08.2007ಕ್ಕೆ) ಅಭ್ಯರ್ಥಿಗೆ ಕನಿಷ್ಠ 18 ವರ್ಷ ವಯಸ್ಸಾಗಿರಬೇಕು ಮತ್ತು ಕೆಳಕಂಡ ಗರಿಷ್ಠ ವಯೋಮಿತಿ ಮೀರಿರಬಾರದು–

ಎ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಕ್ಕೆ ಸೇರಿದ ಅಭ್ಯರ್ಥಿಗಳಿಗೆ 25 ವರ್ಷಗಳು.

ಬಿ. ಸಾಮಾನ್ಯ ವರ್ಗದ ಅಭ್ಯರ್ಥಿಗಳಿಗೆ 23 ವರ್ಷಗಳು.

ಸಿ. ಮಾಜಿ ಸೈನಿಕ ಅಭ್ಯರ್ಥಿಯು ಸೈನ್ಯ ವಿಯೋಜನೆ, ಸೇವೆಯಿಂದ ತೆಗೆದು ಹಾಕಿದ ಹಾಗೂ ಸೇವಾ ನಿವೃತ್ತಿ ಹೊಂದಿದ ಕಾರಣದಿಂದ ಬಿಡುಗಡೆಯಾದ ಮಾಜಿ ಯೋಧರಾಗಿದ್ದಲ್ಲಿ ಅವರಿಗೆ ಅವರು ಸೇವೆ ಸಲ್ಲಿಸಿದ ಸೇವಾವಧಿಯ ಜೊತೆಗೆ ಹೆಚ್ಚುವರಿ ಮೂರು ವರ್ಷಗಳ ರಿಯಾಯಿತಿಯನ್ನು ನೀಡಲಾಗುವುದು.

**(2) ಕನಿಷ್ಠ ವಿದ್ಯಾರ್ಹತೆ:**

ಇಂಡಿಯಾ ರಿಸರ್ವ್ ಬೆಟಾಲಿಯನ್ ಪೊಲೀಸ್ ಪೇದೆ ಹುದ್ದೆಗೆ ಸಂಬಂಧಿಸಿದಂತೆ SSLC / 10ನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು.

**(3) ವೇತನ ಶ್ರೇಣಿ:**

ಇಂಡಿಯಾ ರಿಸರ್ವ್ ಬೆಟಾಲಿಯನ್ ಪೊಲೀಸ್ ಪೇದೆಗಳಿಗೆ **ರೂ. 5800-100-6000-125-6500-150-7100-175-7800-200-8600-225-9500-250-10500.**

**3. ಲಿಖಿತ ಪರೀಕ್ಷೆ :**

ಇಂಡಿಯಾ ರಿಸರ್ವ್ ಬೆಟಾಲಿಯನ್ ಪೊಲೀಸ್ ಪೇದೆ ಹುದ್ದೆಗೆ ಸಂಬಂಧಿಸಿದಂತೆ ಕನ್ನಡ ಅಥವಾ ಆಂಗ್ಲ ಭಾಷೆಯಲ್ಲಿ 100 ಅಂಕಗಳಿಗೆ ವಸ್ತುನಿಷ್ಠ (Objective) ರೀತಿಯ ಬಹುವಿಧ ಆಯ್ಕೆ (Multiple Choice) ಉತ್ತರಗಳ ಲಿಖಿತ ಪರೀಕ್ಷೆ ಇರುತ್ತದೆ. **ಪ್ರತಿ ಸರಿ ಉತ್ತರಕ್ಕೆ 1.00 ಅಂಕಗಳು ನೀಡಲಾಗುವುದು ಮತ್ತು ತಪ್ಪು ಉತ್ತರಗಳಿಗೆ 0.25 ಅಂಕಗಳನ್ನು ಕಳೆಯಲಾಗುವುದು.** ಪರೀಕ್ಷೆಯ ಅವಧಿಯು ಒಂದೂವರೆ ಗಂಟೆಯದ್ದಾಗಿರುತ್ತದೆ. ಅಭ್ಯರ್ಥಿಗಳು ಈ ವಸ್ತುನಿಷ್ಠ ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಮತ್ತು ಅವರು ಅರ್ಹತಾ (Qualifying) ಪರೀಕ್ಷೆಯಲ್ಲಿ ಪಡೆದ ಶೇಕಡಾ ಅಂಕಗಳನ್ನೂ ಕೂಡಿ ಅದರ ಆಧಾರದ ಮೇಲೆ ಅರ್ಹತಾ ಪಟ್ಟಿಯನ್ನು ತಯಾರಿಸಲಾಗುವುದು. ಈ ಅರ್ಹತಾ ಪಟ್ಟಿಯಿಂದ ಪ್ರತಿ ವರ್ಗದಲ್ಲಿ ಅಧಿಸೂಚಿತ ಖಾಲಿ ಇರುವ ಹುದ್ದೆಗಳಿಗೆ ಅನುಗುಣವಾಗಿ ಅರ್ಹ ಅಭ್ಯರ್ಥಿಗಳನ್ನು 1:5 ರ ಪ್ರಮಾಣದಲ್ಲಿ ಅಥವಾ ಅವಶ್ಯವಿರುವ ಖಾಲಿ ಹುದ್ದೆಗಳು ತುಂಬುವವರೆಗೆ ಅರ್ಹ ಅಭ್ಯರ್ಥಿಗಳನ್ನು ದೇಹದಾರ್ಢ್ಯತೆ ಪರೀಕ್ಷೆಗೆ ಕರೆಯಲಾಗುವುದು.

ರೋಲ್ ನಂ., ಲಿಖಿತ ಪರೀಕ್ಷೆಯ ದಿನಾಂಕ, ಸಮಯ ಮತ್ತು ಸ್ಥಳವನ್ನು ಅರ್ಜಿಗಳನ್ನು ಖರೀದಿಸಿದಂತಹ ಜಿಲ್ಲಾ ಪೊಲೀಸ್ ಸೂಪರಿಂಟೆಂಡೆಂಟ್ ಕಛೇರಿಗಳಲ್ಲಿ ಪ್ರಕಟಿಸಲಾಗುವುದು. ಆದಾಗ್ಯೂ, ಲಿಖಿತ ಪರೀಕ್ಷೆಯ ಕರೆಪತ್ರಗಳನ್ನು ಜಿಲ್ಲಾ ಪೊಲೀಸ್ ಸೂಪರಿಂಟೆಂಡೆಂಟ್ ಕಛೇರಿಯಿಂದ ಪ್ರತ್ಯೇಕವಾಗಿ ರವಾನಿಸಲಾಗುವುದು. ಲಿಖಿತ ಪರೀಕ್ಷೆಯನ್ನು ಅಕ್ಟೋಬರ್ ತಿಂಗಳ ಮೊದಲ ವಾರದಲ್ಲಿ ನಡೆಸಲು ಉದ್ದೇಶಿಸಲಾಗಿದೆ.

ಈ ಕೆಳಕಂಡ ಕಛೇರಿಗಳ ಸೂಚನಾ ಫಲಕಗಳಲ್ಲಿಯೂ ಸಹ ಈ ಮಾಹಿತಿ ಲಭ್ಯವಾಗುವುದು. ಅಭ್ಯರ್ಥಿಗಳು ಸಂಬಂಧಪಟ್ಟ ಕಛೇರಿಗಳಲ್ಲಿ ಮಾಹಿತಿ ಪಡೆಯಬಹುದು. **ಲಿಖಿತ ಪರೀಕ್ಷೆ ಹಾಗೂ ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಪರೀಕ್ಷೆಯನ್ನು 6 ಕೇಂದ್ರಗಳಲ್ಲಿ ನಡೆಸಲಾಗುವುದು ಅಂದರೆ : ಬೆಂಗಳೂರು, ಬೆಳಗಾವಿ, ದಾವಣಗೆರೆ, ಗುಲ್ಬರ್ಗಾ, ಮಂಗಳೂರು ಹಾಗೂ ಮೈಸೂರು.** ಅಭ್ಯರ್ಥಿಗಳು ಅರ್ಜಿಯನ್ನು ಯಾವ ಕಛೇರಿಯಲ್ಲಿ ಪಡೆದು ಸಲ್ಲಿಸಿರುತ್ತಾರೋ ಆ ಜಿಲ್ಲೆಯು ಯಾವ ವಲಯ ಕೇಂದ್ರಕ್ಕೆ ಒಳಪಡುತ್ತದೋ ಆ ಕೇಂದ್ರದಲ್ಲಿ ಲಿಖಿತ ಪರೀಕ್ಷೆ ಹಾಗೂ ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಹಾಜರಾಗತಕ್ಕದ್ದು. (ಉದಾ: ಕೋಲಾರದಲ್ಲಿ ಅರ್ಜಿ ಸ್ವೀಕರಿಸಿ ಸಲ್ಲಿಸಿದ್ದರೆ ಲಿಖಿತ ಪರೀಕ್ಷೆ ಹಾಗೂ ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಬೆಂಗಳೂರು ಕೇಂದ್ರದಲ್ಲಿ ಹಾಜರಾಗಬೇಕು).

| **ಅರ್ಜಿ ಸ್ವೀಕೃತಿ, ಸಲ್ಲಿಕೆ ಕೇಂದ್ರಗಳು** | **ಲಿಖಿತ ಪರೀಕ್ಷೆ ಹಾಗೂ ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಕೇಂದ್ರಗಳು** |
|---|---|
| 1. ಪೊಲೀಸ್ ಅಧೀಕ್ಷಕರು, ಬೆಂಗಳೂರು ಜಿಲ್ಲೆ<br>2. ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ<br>3. ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ | ಬೆಂಗಳೂರು |
| 1. ಪೊಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ<br>2. ಪೊಲೀಸ್ ಅಧೀಕ್ಷಕರು, ಧಾರವಾಡ ಜಿಲ್ಲೆ<br>3. ಪೊಲೀಸ್ ಅಧೀಕ್ಷಕರು, ಬಿಜಾಪುರ ಜಿಲ್ಲೆ<br>4. ಪೊಲೀಸ್ ಅಧೀಕ್ಷಕರು, ಬಾಗಲಕೋಟೆ ಜಿಲ್ಲೆ | ಬೆಳಗಾವಿ |
| 1. ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ<br>2. ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ<br>3. ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ<br>4. ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಜಿಲ್ಲೆ | ದಾವಣಗೆರೆ |

| ಅರ್ಜಿ ಸ್ವೀಕೃತಿ, ಸಲ್ಲಿಕೆ ಕೇಂದ್ರಗಳು | ಲಿಖಿತ ಪರೀಕ್ಷೆ ಹಾಗೂ ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಕೇಂದ್ರಗಳು |
|---|---|
| 1. ಪೊಲೀಸ್ ಅಧೀಕ್ಷಕರು, ಬೀದರ್ ಜಿಲ್ಲೆ<br>2. ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಜಿಲ್ಲೆ<br>3. ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆ<br>4. ಪೊಲೀಸ್ ಅಧೀಕ್ಷಕರು, ಕೊಪ್ಪಳ ಜಿಲ್ಲೆ | ಗುಲ್ಬರ್ಗಾ |
| 1. ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು<br>2. ಪೊಲೀಸ್ ಅಧೀಕ್ಷಕರು, ಉಡುಪಿ ಜಿಲ್ಲೆ<br>3. ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ | ಮಂಗಳೂರು |
| 1. ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ<br>2. ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ | ಮೈಸೂರು |

**4. ದೇಹದಾರ್ಢ್ಯತೆ ಪರೀಕ್ಷೆ :**

ಪೊಲೀಸ್ ಪೇದೆ ಹುದ್ದೆಗಳಿಗೆ ಸಂಬಂಧಿಸಿದಂತೆ:

| | **ಇಂಡಿಯಾ ರಿಸರ್ವ್ ಬೆಟಾಲಿಯನ್ ಪೊಲೀಸ್ ಪೇದೆ** |
|---|---|
| ಎತ್ತರ | 168 ಸೆಂ.ಮೀ. |
| ಎದೆ ಸುತ್ತಳತೆ | 5 ಸೆಂ.ಮೀ. ವಿಸ್ತಾರಗೊಂಡರೆ 86 ಸೆಂ.ಮೀ. ಗಳಿಗೆ ಕಡಿಮೆ ಇಲ್ಲದಂತೆ ಎದೆ ಸುತ್ತಳತೆ ಹೊಂದಿರಬೇಕು. |
| ತೂಕ | ಅನ್ವಯಿಸುವುದಿಲ್ಲ |
| ದೃಷ್ಟಿ | ಉತ್ತಮ ಕನಿಷ್ಠ<br>1. ದೂರದೃಷ್ಟಿ 6/9 ಅಥವಾ 6/9<br>6/9 6/12<br>2. ಸಮೀಪ ದೃಷ್ಟಿ 0/6 0/8<br>ಪ್ರತಿ ಕಣ್ಣು ಸಂಪೂರ್ಣ ಕ್ಷೇತ್ರ ದೃಷ್ಟಿ ಹೊಂದಿರಬೇಕು. ವರ್ಣಾಂಧತೆ, ಮೆಳ್ಳಗಣ್ಣು ಅಥವಾ ಯಾವುದೇ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆ ಎಂದು ಪರಿಗಣಿಸಲಾಗುವುದು. |
| ಶ್ರವಣ ಶಕ್ತಿ | 1) ರಿನ್ನೇಸ್ ಪರೀಕ್ಷೆ 2) ವೆಬ್ಬರ್ ಪರೀಕ್ಷೆ 3) ವೆರ್ಟಿಗೋ ಪರೀಕ್ಷೆ<br>ಮೇಲಿನ ಪರೀಕ್ಷೆಗಳಲ್ಲಿ ಯಾವುದೇ ನ್ಯೂನತೆಗಳು ಕಂಡು ಬಂದಲ್ಲಿ ಅನರ್ಹತೆ ಎಂದು ಪರಿಗಣಿಸಲಾಗುವುದು. |

ಕೆಳಕಂಡವುಗಳು ದೈಹಿಕ ಅನರ್ಹತೆಗಳಾಗಿರುತ್ತವೆ:

(1) ತಾಗು ಮಂಡಿ (2) ಬಾಗಿದ ಕಾಲುಗಳು (3) ಚಪ್ಪಟೆ ಪಾದ (4) ಅಪಧಮನಿ ಊತ (5) ಮಾತಿನಲ್ಲಿ ಅಡಚಣೆ

**5. ದೈಹಿಕ ಸಾಮರ್ಥ್ಯ ಪರೀಕ್ಷೆ:**

ಈ ಕೆಳಕಂಡ ದೈಹಿಕ ಸಾಮರ್ಥ್ಯ ಪರೀಕ್ಷೆಯನ್ನು ನಡೆಸಲಾಗುವುದು.

**ಪೊಲೀಸ್ ಪೇದೆಗಳಿಗೆ ಸಂಬಂಧಿಸಿದಂತೆ**

| ಅಂಶಗಳು | ಅರ್ಹತಾ ವೇಳೆ/ದೂರ |
|---|---|
| 100 ಮೀಟರ್ ಓಟ | 15 ಸೆಕೆಂಡುಗಳು |
| ಎತ್ತರ ಜಿಗಿತ | 1.20 ಮೀಟರು |
| ಉದ್ದ ಜಿಗಿತ | 3.80 ಮೀಟರು |
| ಗುಂಡೆಸೆತ (7.26 ಕಿಲೋ) | 5.60 ಮೀಟರು |
| 800 ಮೀಟರ್ ಓಟ | 2 ನಿಮಿಷ 50 ಸೆಕೆಂಡುಗಳು |

**ಮಾಜಿ ಸೈನಿಕ ಹುದ್ದೆಗಳಿಗೆ ಸಂಬಂಧಿಸಿದಂತೆ**

| ಅಂಶಗಳು | ಅರ್ಹತಾ ವೇಳೆ/ದೂರ |
|---|---|
| 100 ಮೀಟರ್ ಓಟ | 18.5 ಸೆಕೆಂಡುಗಳು |
| ಎತ್ತರ ಜಿಗಿತ | 0.90 ಮೀಟರು |
| ಉದ್ದ ಜಿಗಿತ | 2.50 ಮೀಟರು |
| ಗುಂಡೆಸೆತ (4 ಕಿಲೋ) | 3.75 ಮೀಟರು |
| 200 ಮೀಟರ್ ಓಟ | 40 ಸೆಕೆಂಡುಗಳು |

ಮೇಲಿನ ಪ್ರತಿಯೊಂದು ದೈಹಿಕ ಸಾಮರ್ಥ್ಯ ಪರೀಕ್ಷೆಗೆ 10 ಅಂಕಗಳನ್ನು ನಿಗದಿಪಡಿಸಲಾಗಿದೆ. ಒಟ್ಟು 50 ಗರಿಷ್ಠ ಅಂಕಗಳು. 5 ದೈಹಿಕ ಸಾಮರ್ಥ್ಯ ಪರೀಕ್ಷೆಗಳಲ್ಲಿ ಕನಿಷ್ಠ 3 ರಲ್ಲಿ ಉತ್ತೀರ್ಣರಾಗಿ 30 ಅಂಕಗಳನ್ನು ಪಡೆಯಲೇಬೇಕು. ಈ ಅಂಕಗಳನ್ನು ಪಡೆಯದ ಅಭ್ಯರ್ಥಿಗಳನ್ನು ಅನರ್ಹಗೊಳಿಸಲಾಗುವುದು. ದೈಹಿಕ ಸಾಮರ್ಥ್ಯ ಪರೀಕ್ಷೆ ಮುಗಿದ ನಂತರ ಸಮಿತಿಯ ಮುಂದೆ ತಮ್ಮ ಸಾಧನೆಯ ಬಗ್ಗೆ ಪ್ರಮಾಣ ಪತ್ರಕ್ಕೆ ಅಭ್ಯರ್ಥಿಯು ಸಹಿ ಹಾಕಬೇಕು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳು ಅನರ್ಹತೆಗೊಳಗಾಗುವರು. **ಲಿಖಿತ ಪರೀಕ್ಷೆ ಹಾಗೂ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಗಳಿಸಿದ ಶೇಕಡಾವಾರು ಅಂಕಗಳಿಗೆ ದೈಹಿಕ ಸಾಮರ್ಥ್ಯ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಕೂಡಿಸಿ ಈ ಒಟ್ಟಾರೆ ಗಳಿಸಿದ ಅಂಕಗಳ ಅನ್ವಯ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗುವುದು.**

**ಟಿಪ್ಪಣಿ:** ದೇಹದಾರ್ಢ್ಯತೆ ಪರೀಕ್ಷೆಯನ್ನು ಒಂದು ಸಮಿತಿಯು ಪರಿಗಣಿಸುವುದು. ಯಾವುದೇ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಪರಿಗಣಿಸಲಾಗುವುದಿಲ್ಲ. ದೇಹದಾರ್ಢ್ಯತೆ ಪರೀಕ್ಷೆ ಪೂರ್ಣಗೊಂಡ ನಂತರ ಸಂಬಂಧಪಟ್ಟ ದಾಖಲೆಗೆ ಅಭ್ಯರ್ಥಿಗಳು ತಮ್ಮ ಸಹಿ ಹಾಕಬೇಕು. ಇಲ್ಲದಿದ್ದಲ್ಲಿ ಅಂತಹವರನ್ನು ಅನರ್ಹರೆಂದು ಪರಿಗಣಿಸಲಾಗುವುದು.

**6. ತರಬೇತಿ ಮತ್ತು ಖಾಯಂಪೂರ್ವ ಅವಧಿ:**

**ತರಬೇತಿ:** ನೇಮಕಗೊಂಡ ಅಭ್ಯರ್ಥಿಗಳು ಪೊಲೀಸ್ ತರಬೇತಿ ಶಾಲೆಗಳಲ್ಲಿ 9 ತಿಂಗಳು ಮೂಲ ತರಬೇತಿಯನ್ನು ಪಡೆಯಬೇಕು. ತರಬೇತಿಯಲ್ಲಿ ನಿಗಧಿಪಡಿಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

**ಖಾಯಂಪೂರ್ವ ಅವಧಿ:** ತರಬೇತಿ ಅವಧಿಯೂ ಸೇರಿದಂತೆ ಎರಡು ವರ್ಷ ಆರು ತಿಂಗಳುಗಳಾಗಿರುವುದು.

**7. ಶುಲ್ಕ:**

ಅ) ಈ ಹುದ್ದೆಗಳಿಗೆ ಸೇರಲಿಚ್ಛಿಸುವ ಅಭ್ಯರ್ಥಿಗಳು **ರೂ.50/–** ಗಳನ್ನು **ನಗದು** ನೀಡಿ ಅರ್ಜಿಯನ್ನು (ಎಲ್ಲಿ ಅರ್ಜಿಯನ್ನು ಸಲ್ಲಿಸಲು ಇಚ್ಛಿಸುತ್ತಾರೋ) ಸಂಬಂಧಪಟ್ಟ ಪೊಲೀಸ್ ಸೂಪರಿಂಟೆಂಡೆಂಟ್ ಕಛೇರಿಯಲ್ಲಿ ಪಡೆಯತಕ್ಕದ್ದು ಮತ್ತು ಆ ಅರ್ಜಿಯನ್ನು ಭರ್ತಿ ಮಾಡಿ ಅದೇ ಜಿಲ್ಲೆಯ ಪೊಲೀಸ್ ಸೂಪರಿಂಟೆಂಡೆಂಟ್ ಕಛೇರಿಯಲ್ಲಿಯೇ ಸಲ್ಲಿಸತಕ್ಕದ್ದು. ಅರ್ಜಿಯನ್ನು ಬದಲಾಯಿಸುವಂತಿಲ್ಲ. ಕಾರಣ ಪ್ರತಿ ಜಿಲ್ಲೆಗೆ ಪ್ರತ್ಯೇಕವಾದ ಅರ್ಜಿ ಕೋಡ್ ಇರುವುದರಿಂದ ಅಭ್ಯರ್ಥಿಯು ಯಾವ ಜಿಲ್ಲೆಯಲ್ಲಿ ಅರ್ಜಿಯನ್ನು ಪಡೆದಿರುತ್ತಾರೋ ಅಲ್ಲಿಯೇ ಸಲ್ಲಿಸತಕ್ಕದ್ದು.

ಆ) ಪರೀಕ್ಷಾ ಶುಲ್ಕವಾಗಿ **ರೂ.150/–** ಗಳು **ನಗದು ಮಾತ್ರ** ನಿಗದಿಪಡಿಸಲಾಗಿದೆ (ಡಿ.ಡಿ., ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ).

ಇ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1 ಮೀಸಲಾತಿ ಅಭ್ಯರ್ಥಿಗಳಿಗೆ **ರೂ.50/–** ಗಳನ್ನು **ನಗದು** ಪರೀಕ್ಷಾ ಶುಲ್ಕವನ್ನಾಗಿ ನಿಗದಿಪಡಿಸಲಾಗಿದೆ (ಡಿ.ಡಿ., ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ).

ಈ) ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ನೇಮಕಾತಿ ಸಮಿತಿಯು ನಡೆಸುವ ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

**8. ಗ್ರಾಮೀಣ ಮೀಸಲಾತಿ :**

ಅ) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರಬೇಕು, **ಮತ್ತು**

ಆ) ಅಭ್ಯರ್ಥಿಯು ವ್ಯಾಸಂಗ ಮಾಡಿದ ಸ್ಥಳವು **ವ್ಯಾಸಂಗ ಮಾಡಿದ ಅವಧಿಯಲ್ಲಿ** ಅಂದಿನ ಕರ್ನಾಟಕ ಪೌರ ನಿಗಮಗಳ ಅಧಿನಿಯಮ 1976ರ ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ನಿರ್ದಿಷ್ಟ ಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆಯ ಹಂತದಲ್ಲಿರುವ ಪ್ರದೇಶಗಳ ಹೊರತಾಗಿ ಇತರ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಯಾಗಿರಬೇಕು, **ಮತ್ತು**

ಇ) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು ಕರ್ನಾಟಕ ಅಧಿಸೂಚನೆ ಸಂಖ್ಯೆ. ಸಿಆಸುಇ:08:ಸೆನೆನಿ:2001, ದಿನಾಂಕ 13.02.2001ರ ಪ್ರಕಾರ ಮೇಲೆ ಪರಿಭಾಷಿಸಿದಂತೆ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರುವವರು ಸರ್ಕಾರಿ ಆದೇಶ ಸಂಖ್ಯೆ. ಸಿಆಸುಇ/96/ಸೆನೆನಿ/2005, ದಿನಾಂಕ 10.08.2005ರಲ್ಲಿ ನಿಗಧಿಪಡಿಸಿದ ನಮೂನೆ–2ರ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ ಮತ್ತು ವ್ಯಾಪ್ತಿಯ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿದ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದೊಳಗೆ ಸಲ್ಲಿಸುವುದು. (ನಮೂನೆ–1 (ನಾನ್–ಕ್ರೀಮಿ ಲೇಯರ್) ಮತ್ತು ನಮೂನೆ–2 ಇವುಗಳು ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ಅಭ್ಯರ್ಥಿಗಳಿಗೆ ಕಡ್ಡಾಯವಾಗಿರುತ್ತದೆ).

ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಸೇರಿದ ಅಭ್ಯರ್ಥಿಗಳು ನಮೂನೆ–2ರಲ್ಲಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದಿಟ್ಟು

ಕೊಂಡಿರತಕ್ಕದ್ದು. ಹಾಗೂ ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ –1ರಲ್ಲಿ (Non-Creamy Layer) ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದಿಟ್ಟು ಕೊಂಡಿರತಕ್ಕದ್ದು.

**ಸೂಚನೆ:** ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

**9. ಮಾಜಿ ಸೈನಿಕ:**

(i) ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯು ದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ, ಆದರೆ ಡಿಫೆನ್ಸ್ ಸೆಕ್ಯುರಿಟಿ ಕೋರ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಪೋರ್ಸ್, ಲೋಕ ಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿಯು ಮಾಜಿ ಸೈನಿಕನೆಂದು ಪರಿಗಣಿಸಲ್ಪಡುವುದಿಲ್ಲ: ಮತ್ತು

(ಅ) ಅಂತಹ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಲ್ಲಿ ಬಿಡುಗಡೆಯಾದವನು.

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು.

1. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.
2. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
3. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**ವಿವರಣೆ:** ಕೇಂದ್ರ ಸಶಸ್ತ್ರ ದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

(ii) ಭಾರತ ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ.36034/27/84–ಸಿಬ್ಬಂದಿ (ಎಸ್‌ಸಿಟಿ), ದಿನಾಂಕ 02.05.1985 ರನ್ವಯ ಮಾಜಿ ಸೈನಿಕರು ಅವರಿಗೆ ನೀಡಿರುವ ಪ್ರಯೋಜನವಾದ ಪುನರ್ ನೇಮಕವನ್ನು ಉಪಯೋಗಿಸಿಕೊಂಡು ಒಂದು ಬಾರಿ ಸರ್ಕಾರಿ ಹುದ್ದೆಗೆ ಆಯ್ಕೆಯಾದಲ್ಲಿ ಅಂತಹ ಮಾಜಿ ಸೈನಿಕರ ಸ್ಥಾನವು ಸರ್ಕಾರಿ ಉದ್ಯೋಗದ ಪುನರ್ ನೇಮಕಕ್ಕೆ ರದ್ದಾಗುತ್ತದೆ. ಕರ್ನಾಟಕ ಸರ್ಕಾರದ ಪತ್ರ ಸಂಖ್ಯೆ.ಒಇ/90/ಪೊಸಿಅ/2005, ದಿನಾಂಕ 02.02.2006ರ ಪತ್ರದಲ್ಲಿ ದಿನಾಂಕ 02.05.1985ರ ಕೇಂದ್ರ ಸರ್ಕಾರದ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಯನ್ವಯ ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿರುತ್ತದೆ. (ಈ ಕಾರಣದಿಂದ ಮಾಜಿ ಸೈನಿಕರು ಕಡ್ಡಾಯವಾಗಿ ಕಾಲಂ 6ಎ ಮತ್ತು 6ಬಿ ಯನ್ನು ಭರ್ತಿ ಮಾಡತಕ್ಕದ್ದು. ಕಾಲಂ 6ಸಿ ಮಾಜಿ ಸೈನಿಕರು ಭೂದಳ/ನೌಕಾದಳ/ ವಾಯು ದಳದಲ್ಲಿ ಸೇವೆ ಸಲ್ಲಿಸಿದಷ್ಟು ಅವಧಿಯನ್ನು ಕಡ್ಡಾಯವಾಗಿ ಭರ್ತಿ ಮಾಡತಕ್ಕದ್ದು)

(iii) ಈ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕದ ನಂತರ ಯಾವೊಬ್ಬ ಮಾಜಿ ಸೈನಿಕ ಸರ್ಕಾರಿ ನೌಕರಿಯೊಂದಕ್ಕೆ ಮಾಜಿ ಸೈನಿಕ ಮೀಸಲಾತಿ ಪಡೆದು ಸೇರಿದರೆ, ಅಂತಹ ಮಾಜಿ ಸೈನಿಕ ತಾನು ನೌಕರಿ ಸೇರಿದ ಬಗ್ಗೆ ಪೋಲೀಸ್ ಸೂಪರಿಂಟೆಂಡೆಂಟ್/ಪೊಲೀಸ್ ಕಮೀಷನರ್ ಕಛೇರಿಗೆ ಮಾಹಿತಿ ನೀಡತಕ್ಕದ್ದು. ಇಂತಹ ಅಭ್ಯರ್ಥಿಯು ಮಾಜಿ ಸೈನಿಕ ಮೀಸಲಾತಿಗೆ ಅನರ್ಹನಾಗುತ್ತಾನೆ.

(iv) ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

**10. ಯೋಜನೆ ನಿರಾಶ್ರಿತರು :**

ಯೋಜನಾ ನಿರಾಶ್ರಿತ ಮೀಸಲಾತಿ ಕೋರುವ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ. ಡಿಪಿಎಆರ್:23:ಎಸ್ಆರ್ಆರ್:99, ದಿನಾಂಕ 23.11.2000ರನ್ವಯ ಸರ್ಕಾರದ ಸುತ್ತೋಲೆ ಸಂಖ್ಯೆ. ಸಿಆಸುಇ:44:ಸೇನೆನಿ:2001, ದಿನಾಂಕ 27.07.2001ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು.

**11. ಕನ್ನಡ ಮಾಧ್ಯಮ :**

ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

**12. ಜಾತಿ ಮೀಸಲಾತಿ ಪ್ರಮಾಣ ಪತ್ರಗಳು :**

ಜಾತಿ ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಕಂಡ ನಮೂನೆಗಳಲ್ಲಿ ಸಲ್ಲಿಸುವುದು.

ಅ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತ'ಹಶೀಲ್ದಾರ್ ರವರಿಂದ ಪಡೆದ ನಮೂನೆ–ಡಿ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

ಆ) ಪ್ರವರ್ಗ–1 ವರ್ಗದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ ನಮೂನೆ–ಇ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

ಇ) ಪ್ರವರ್ಗ–2ಎ, 2ಬಿ, 3ಎ, 3ಬಿ ವರ್ಗದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ ನಮೂನೆ–ಎಫ್ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

**ಸೂಚನೆ:**ನಮೂನೆ–ಎಫ್ ಪ್ರಮಾಣ ಪತ್ರವು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ಒಂದು ವರ್ಷಕ್ಕಿಂತ ಹಳೆಯದಾಗಿರಬಾರದು.

**13. ಲಗತ್ತುಗಳು :** ಭರ್ತಿ ಮಾಡಿದ ಓ.ಎಂ.ಆರ್. ಅರ್ಜಿಯ ಜೊತೆಗೆ ಈ ಕೆಳಕಂಡವುಗಳನ್ನು ಅರ್ಜಿಯೊಂದಿಗೆ ನೀಡಿರುವ ಲಕೋಟೆಯಲ್ಲಿಯೇ ಸಲ್ಲಿಸುವುದು. (ಲಗತ್ತುಗಳನ್ನು ಓ.ಎಂ.ಆರ್. ಜೊತೆಗೆ ಪಿನ್, ಸ್ಟ್ಯಾಪಲ್ ಮತ್ತು ರಂಧ್ರ ಮಾಡಬಾರದು)

1) ಅರ್ಹತಾ (Qualifying) ಪರೀಕ್ಷೆ ಅಂದರೆ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಅಂಕ ಪಟ್ಟಿಯ ಜೆರಾಕ್ಸ್ ಪ್ರತಿ.
2) ಅರ್ಜಿಯಲ್ಲಿ ಫೋಟೋ ಅಂಟಿಸಲು ನಿಗಧಿಪಡಿಸಿರುವ ಜಾಗದಲ್ಲಿ ನಿಮ್ಮ ಇತ್ತೀಚಿನ (6 ತಿಂಗಳೊಳಗಿನ) ಭಾವಚಿತ್ರವನ್ನು ಅಂಟಿಸಿ ಅದರ ಮೇಲೆ ಪೂರ್ಣ ಸಹಿ ಮಾಡುವುದು ಮತ್ತು ಎಡಗೈ ಹೆಬ್ಬೆಟ್ಟಿನ ಗುರುತನ್ನು ನಿಗಧಿ ಪಡಿಸಿರುವ ಸ್ಥಳದಲ್ಲಿ ಹಚ್ಚುವುದು.
3) ರೂ. 5/– ಅಂಚೆ ಚೀಟಿಯನ್ನು ಹಚ್ಚಿದ **ಎರಡು** ಲಕೋಟೆ 9" x 4" (Envelope) ಯಲ್ಲಿ ನಿಮ್ಮ ಖಾಯಂ ಅಂಚೆಯ ವಿಳಾಸವನ್ನು ಬರೆದು ಅರ್ಜಿಯೊಂದಿಗೆ ಲಗತ್ತಿಸುವುದು.
4) ಹಾಜರಾತಿ ಹಾಳೆ (ತ್ರಿಪ್ರತಿಗಳಲ್ಲಿ)ಯನ್ನು ಭರ್ತಿ ಮಾಡಿ ಭಾವಚಿತ್ರವನ್ನು ಅಂಟಿಸಿ ಅದರ ಮೇಲೆ ಪೂರ್ಣ ಸಹಿ ಮಾಡಿ ಲಗತ್ತಿಸುವುದು.

**14. ಪ್ರಾಮುಖ್ಯವಾದ ಸೂಚನೆಗಳು:** ಅಭ್ಯರ್ಥಿಗಳು ಯಾವುದೇ ಮೂಲ ಪ್ರಮಾಣ ಪತ್ರಗಳನ್ನು ಅರ್ಜಿಯೊಂದಿಗೆ ಲಗತ್ತಿಸಕೂಡದು. ಆದರೆ ಕೆಳಕಂಡ ಮೂಲ ಪ್ರಮಾಣ ಪತ್ರಗಳನ್ನು ತೆಗೆದಿಟ್ಟುಕೊಂಡಿದ್ದು, ಸಮಿತಿಯು ಸೂಚಿಸಿದಾಗ ಹಾಜರು ಪಡಿಸತಕ್ಕದ್ದು.

1) ಹುಟ್ಟಿದ ದಿನಾಂಕದ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ ಪ್ರಮಾಣ ಪತ್ರ)
2) ಸರ್ಕಾರಿ ಇಲಾಖೆಯಲ್ಲಿ/ರಾಜ್ಯಸರ್ಕಾರದ/ಕೇಂದ್ರ ಸರ್ಕಾರದ/ಸರ್ಕಾರದ ಯಾವುದೇ ಪ್ರಾಧಿಕಾರದಲ್ಲಿ/ರಾಜ್ಯ ಅಥವಾ ಕೇಂದ್ರ ಸರ್ಕಾರದ ಸಾರ್ವಜನಿಕ ಸ್ವಾಮ್ಯದ ಕಂಪನಿಗಳಲ್ಲಿ ಪ್ರಸ್ತುತ ಉದ್ಯೋಗಿಯಾಗಿದ್ದಲ್ಲಿ ಅಂತಹವರು ಇಲಾಖಾ ವತಿಯಿಂದ ಕರ್ತವ್ಯದಿಂದ ಬಿಡುಗಡೆ ಮಾಡುವ ಬಗ್ಗೆ ಇಚ್ಛಾ ಅನುಮತಿ ಪತ್ರ.
3) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ ಡಿ/ಇ/ಎಫ್ ನಲ್ಲಿ ತಹಶೀಲ್ದಾರ್‌ರಿಂದ ಪಡೆದ ಪ್ರಮಾಣ ಪತ್ರಗಳನ್ನು ಪಡೆದಿಟ್ಟುಕೊಂಡಿರತಕ್ಕದ್ದು.
4) ಯೋಜನಾ ನಿರಾಶ್ರಿತ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್‌ರವರಿಂದ ಪಡೆದ ಪ್ರಮಾಣ ಪತ್ರ.
5) ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ).

6) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿರಬೇಕು.

7) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿಟ್ಟು ಕೊಂಡಿರತಕ್ಕದ್ದು.

**15.** ಅಭ್ಯರ್ಥಿಗಳು ಮೀಸಲಾತಿಗಳನ್ನು ಕೋರಿದಲ್ಲಿ ಅರ್ಜಿಯಲ್ಲಿ ಮೀಸಲಾತಿಗಾಗಿ ನಿರ್ದಿಷ್ಟಪಡಿಸಿದ ವೃತ್ತಗಳನ್ನು ಕಪ್ಪು / ನೀಲಿ ಬಣ್ಣದ ಬಾಲ್ ಪಾಯಿಂಟ್ ಪೆನ್ನಿನಿಂದ ತುಂಬತಕ್ಕದ್ದು. ಮೀಸಲಾತಿಯ ವೃತ್ತಗಳಲ್ಲಿ ಖಾಲಿ ಬಿಟ್ಟಿರುವ ಅಭ್ಯರ್ಥಿಗಳ ಮೀಸಲಾತಿಯನ್ನು ಸಾಮಾನ್ಯ ಅರ್ಹತೆಯೆಂದು ಪರಿಗಣಿಸಲಾಗುವುದು. ನಿರ್ದಿಷ್ಟವಾದ ವೃತ್ತಗಳಲ್ಲಿ ಮೀಸಲಾತಿಯನ್ನು ನಮೂದಿಸದೆ ಬೇರೆ ಕಡೆ ಗುರುತು (ಶೇಡ್) ಮಾಡಿದ್ದಲ್ಲಿ ಅಂತಹವುಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ವಿಳಾಸ ಬದಲಾವಣೆಯಾಗಿದ್ದಲ್ಲಿ ತಕ್ಷಣದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ನೇಮಕಾತಿ ಸಮಿತಿಯ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ನೇಮಕಾತಿ ಸಮಿತಿಯು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ನೇಮಕಾತಿ ಸಮಿತಿಯು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು.

ಅಭ್ಯರ್ಥಿಗಳು ನೇಮಕಾತಿ ಸಮಿತಿಯೊಡನೆ ಸಂಪರ್ಕಿಸಬೇಕಾದ ಸಂದರ್ಭದಲ್ಲಿ ಅವರ ಮನವಿ ಈ ಕೆಳಕಂಡ ಮಾಹಿತಿಗಳನ್ನು ಒಳಗೊಂಡಿರಬೇಕು.

1) ಅರ್ಜಿಯ ನಕಲು ಪ್ರತಿ
2) ಅರ್ಜಿ ಸಲ್ಲಿಸಿದ ಬಗ್ಗೆ ನೇಮಕಾತಿ ಸಮಿತಿಯ ಕಛೇರಿಯವರು ನೀಡಿದ ಅರ್ಜಿ ಸ್ವೀಕೃತಿ ಕೌಂಟರ್ ಫಾಯಿಲ್ ನಕಲು ಪ್ರತಿ

**16. ವಿಶೇಷ ಸೂಚನೆಗಳು :**

1) **ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಬಾರದೆಂದು ಸಲಹೆ ನೀಡಲಾಗಿದೆ. ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸುವ ಬದಲು ಒಂದೇ ಅರ್ಜಿಯನ್ನು ಪಡೆದು ಅತೀ ಜಾಗರೂಕತೆಯಿಂದ ಮತ್ತು ಬಹಳ ಎಚ್ಚರಿಕೆಯಿಂದ ಭರ್ತಿ ಮಾಡತಕ್ಕದ್ದು. ಆದಾಗ್ಯೂ ಅಭ್ಯರ್ಥಿಗಳು ಒಂದು ಕಛೇರಿಗಿಂತ ಹೆಚ್ಚು ಕಛೇರಿಗಳಲ್ಲಿ ಅರ್ಜಿಯನ್ನು ಸಲ್ಲಿಸಬಹುದಾಗಿರುತ್ತದೆ. ಆದರೆ, ರಾಜ್ಯದ ಎಲ್ಲಾ ವಲಯ ಕೇಂದ್ರಗಳಲ್ಲಿ ಲಿಖಿತ ಪರೀಕ್ಷೆಯು ಒಂದೇ ದಿನ ನಡೆಯುವುದರಿಂದ ಒಂದೇ ಒಂದು ಕೇಂದ್ರದಲ್ಲಿ ಪರೀಕ್ಷೆಗೆ ಹಾಜರಾಗಲು ಸಾಧ್ಯ ಎಂಬುದನ್ನು ಗಮನದಲ್ಲಿಟ್ಟುಕೊಳ್ಳತ್ತಕ್ಕದ್ದು.**

2) ಅರ್ಹ ಅಭ್ಯರ್ಥಿಗಳು ಮೂಲ ದಾಖಲಾತಿಗಳ ಪರಿಶೀಲನಾ ಸಂದರ್ಭದಲ್ಲಿ (ಅಂದರೆ ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಸಂದರ್ಭದಲ್ಲಿ) ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿಗಳಿಗೆ ಪೂರಕವಾಗಿ ಸದರಿ ದಾಖಲಾತಿ / ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ತಪ್ಪದೇ ಹಾಜರುಪಡಿಸಬೇಕು, ಇಲ್ಲದಿದ್ದಲ್ಲಿ ಸದರಿ ಸೌಲಭ್ಯಗಳನ್ನು ಅಭ್ಯರ್ಥಿಗಳು ಕಳೆದುಕೊಳ್ಳುತ್ತಾರೆ. ಆದರೆ **ಅರ್ಜಿಯೊಂದಿಗೆ ಯಾವುದೇ ಮೂಲ ಪ್ರಮಾಣ ಪತ್ರಗಳನ್ನು ಸಲ್ಲಿಸುವ ಅಗತ್ಯವಿರುವುದಿಲ್ಲ.** ಒಂದು ವೇಳೆ ಸಲ್ಲಿಸಿ, ಅವು ಕಳೆದು ಹೋದರೆ ನೇಮಕಾತಿ ಸಮಿತಿಯು ಜವಾಬ್ದಾರಿಯಾಗುವುದಿಲ್ಲ.

3) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಅಂದರೆ ದಿನಾಂಕ: 31.08.2007 ಕ್ಕೆ ಮುನ್ನ ಅಭ್ಯರ್ಥಿಗಳು ಹುದ್ದೆಗೆ ನಿಗದಿಪಡಿಸಿದ ಶೈಕ್ಷಣಿಕ ಕನಿಷ್ಠ ವಿದ್ಯಾರ್ಹತೆಯನ್ನು ಹೊಂದಿರಲೇಬೇಕು.

4) ಇಲಾಖೆಯು ನೀಡಿರುವ ಅರ್ಜಿಯಲ್ಲಿಯೇ ಅಭ್ಯರ್ಥಿಯು ಮಾಹಿತಿಗಳನ್ನು ಸಮರ್ಪಕವಾಗಿ ತುಂಬಿ ಸಲ್ಲಿಸತಕ್ಕದ್ದು. ಯಾವುದೇ ಕಾರಣಕ್ಕೂ ಅರ್ಜಿಯ ನಕಲನ್ನು ಅಥವಾ ಜೆರಾಕ್ಸ್ ಪ್ರತಿಯನ್ನು ಸಲ್ಲಿಸಬಾರದು. ಇಂತಹ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

5) ಅರ್ಜಿಯನ್ನು ಯಾವುದೇ ಸಂದರ್ಭದಲ್ಲಿ ಮಡಚಬಾರದು, ಪಿನ್, ಸ್ಟ್ಯಾಪಲ್ ಮತ್ತು ರಂಧ್ರ ಮಾಡಬಾರದು.

6) **ಅಭ್ಯರ್ಥಿಗಳು ಓ.ಎಂ.ಆರ್. ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿ / ವಿವರಗಳ ಆಧಾರದ ಮೇರೆಗೆ ಅವರ ಅರ್ಹತೆಯನ್ನು ಪರಿಗಣಿಸುವುದರಿಂದ ಮತ್ತು ಅಭ್ಯರ್ಥಿಗಳು ಸಲ್ಲಿಸುವ ಅರ್ಜಿಗಳನ್ನು ಸ್ಕ್ಯಾನಿಂಗ್ ಮಾಡಿಸಿ ಗಣಕ ಯಂತ್ರದ ಮುಖೇನ ಅರ್ಹತಾ ಪಟ್ಟಿಯನ್ನು ಸಿದ್ಧಪಡಿಸುವುದರಿಂದ, ಅಭ್ಯರ್ಥಿಗಳು ಅರ್ಜಿಗಳನ್ನು ತುಂಬುವಾಗ ಯಾವುದೇ ತಪ್ಪು ಅಥವಾ ಸುಳ್ಳು ಮಾಹಿತಿ ನೀಡಬಾರದು. ತಪ್ಪು ಅಥವಾ ಸುಳ್ಳು ಮಾಹಿತಿ ನೀಡಿದ್ದಲ್ಲಿ ಅದಕ್ಕೆ ಅಭ್ಯರ್ಥಿಗಳೇ ಜವಾಬ್ದಾರರಾಗಿರುತ್ತಾರೆ.**

7) **ಚಿತ್ತು ಅಥವಾ ಹೊಡೆದುಹಾಕುವುದು ಕೂಡ ಮಾಡಬಾರದು. ಹಾಗೇನಾದರೂ ಚಿತ್ತು ಆದಲ್ಲಿ ಹೊಡೆದು ಹಾಕಿದಲ್ಲಿ ಅಥವಾ ಅರ್ಜಿಯನ್ನು ವಿರೂಪಗೊಳಿಸಿದಲ್ಲಿ ಮತ್ತೊಂದು ಅರ್ಜಿ ಪಡೆದು ತುಂಬಿ ಸಲ್ಲಿಸುವುದು ಅವಶ್ಯಕ. ಖರೀದಿಸಿದ ಓ.ಎಂ.ಆರ್. ಅರ್ಜಿಯನ್ನು ಜೆರಾಕ್ಸ್ ಪ್ರತಿ ಮಾಡಿಸಿ, ಮೊದಲು ಜೆರಾಕ್ಸ್ ಪ್ರತಿಯಲ್ಲಿ ಭರ್ತಿಮಾಡಿ, ಅರ್ಜಿಯಲ್ಲಿನ ವಿವರಗಳು ಸರಿಯಾಗಿವೆಯೇ ಎಂದು ಮನಗಂಡು ಆ ನಂತರ ಮೂಲ ಅರ್ಜಿಯನ್ನು ಭರ್ತಿ ಮಾಡುವುದು ಸೂಕ್ತ.**

8) ಒಂದು ವೇಳೆ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನದಂದು ಅರ್ಜಿಗಳನ್ನು ಸ್ವೀಕರಿಸಲಾಗುವುದು. ಆದರೆ ವಯೋಮಿತಿ ಹಾಗೂ ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆಯ ಪರಿಗಣನೆಗೆ ದಿನಾಂಕ: 31.08.2007 ಮಾತ್ರ ಅನ್ವಯವಾಗುತ್ತದೆ.

9) ಅಭ್ಯರ್ಥಿಯು ಅರ್ಜಿಯನ್ನು ಸಮರ್ಪಕವಾಗಿ ತುಂಬದೇ ಸದರಿ ಅರ್ಜಿ ತಿರಸ್ಕೃತವಾದಲ್ಲಿ ತತ್ಸಂಬಂಧ ಯಾವುದೇ ರೀತಿಯ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

10) ಅಭ್ಯರ್ಥಿಗಳು ತಮ್ಮ ಅರ್ಜಿಗಳಲ್ಲಿ ನೀಡುವ ಮಾಹಿತಿಗಳು ಸರಿ ಇದೆ ಎಂದು ಭಾವಿಸಿ ಅವರುಗಳು ಸ್ಪರ್ಧಾತ್ಮಕ ಪರೀಕ್ಷೆಯನ್ನು ಬರೆಯಲು ಅರ್ಹರೆ ಎಂಬುದನ್ನು ಸ್ಕ್ಯಾನಿಂಗ್ ಮುಖಾಂತರ ಪರಿಗಣಿಸಿ ಅರ್ಹರೆಂದು ಕಂಡುಬಂದ ಅಭ್ಯರ್ಥಿಗಳಿಗೆ ಮಾತ್ರ ಪ್ರವೇಶ ಪತ್ರಗಳನ್ನು ಜಾರಿ ಮಾಡಲಾಗುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ ಇತ್ಯಾದಿಗಳಿಗೂ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಪೂರ್ಣ ಮಾಹಿತಿ ನೀಡದ ಅಥವಾ ತಪ್ಪು ಮಾಹಿತಿ ನೀಡಿದ, ಶುಲ್ಕ ಪಾವತಿಸದ ಮತ್ತು ಅಭ್ಯರ್ಥಿಯ ಸಹಿ ಇಲ್ಲದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

11) ಪರೀಕ್ಷೆಗೆ ಪ್ರವೇಶವು ಸಂಪೂರ್ಣವಾಗಿ ತಾತ್ಕಾಲಿಕವಾಗಿರುತ್ತದೆ. ಪ್ರವೇಶ ಪತ್ರ ನೀಡಿದ ಮಾತ್ರಕ್ಕೆ ನೇಮಕಾತಿ ಸಮಿತಿಯು ನಿಮ್ಮ ಅಭ್ಯರ್ಥಿತನವನ್ನು ಅಂಗೀಕರಿಸಿದೆ ಎಂದು ಭಾವಿಸತಕ್ಕದ್ದಲ್ಲ.

12) ಲಿಖಿತ ಪರೀಕ್ಷೆಯ ದಿನಾಂಕ, ಸಮಯ ಮತ್ತು ಸ್ಥಳವನ್ನು ಜಿಲ್ಲಾ ಪೊಲೀಸ್ ಅಧೀಕ್ಷಕರ ಕಛೇರಿಗಳಲ್ಲಿ ಪ್ರಕಟಿಸಲಾಗುವುದು. ಸದರಿ ಪರೀಕ್ಷೆಯನ್ನು ಒಂದೇ ದಿನಾಂಕದಂದು ಇಡೀ ರಾಜ್ಯದಲ್ಲಿ ನಡೆಸಲಾಗುವುದು. ಅಕ್ಟೋಬರ್ 2007 ರ ಮೊದಲ ವಾರದಲ್ಲಿ ಈ ಪರೀಕ್ಷೆ ನಡೆಯುವ ಸಂಭವ ಇದೆ.

13) ಪ್ರಶ್ನೆ ಪತ್ರಿಕೆಯ ಬಗ್ಗೆ ಯಾವುದೇ ಬಗೆಯ ಆಕ್ಷೇಪಣೆ ಇದ್ದಲ್ಲಿ. ಪರೀಕ್ಷಾ ಕೇಂದ್ರವನ್ನು ಬಿಡುವ ಮೊದಲು ಆಯಾ ಪರೀಕ್ಷಾ ದಿನವೇ ಸಂಬಂಧಿತ ಮೇಲ್ವಿಚಾರಕರ ಮುಖಾಂತರ ಅವರ ಹೆಸರು, ವಿಳಾಸ, ನೋಂದಣಿ ಸಂಖ್ಯೆ. ಇತ್ಯಾದಿಗಳನ್ನು ನಮೂದಿಸಿರುವ ಲಿಖಿತ ಮನವಿಯನ್ನು ನೇಮಕಾತಿ ಸಮಿತಿಗೆ ಸಲ್ಲಿಸಿ ಸ್ವೀಕೃತಿ (Acknowledgement) ಪಡೆಯಬೇಕು. ಪರೀಕ್ಷಾ ಕೇಂದ್ರ ಬಿಟ್ಟ ನಂತರ ಕಳುಹಿಸುವ ಯಾವುದೇ ಆಕ್ಷೇಪಣೆಯನ್ನು ಮಾನ್ಯ ಮಾಡಲಾಗುವುದಿಲ್ಲ.

14) **ಉತ್ತರ ಪತ್ರಿಕೆಯನ್ನು ಸ್ಕ್ಯಾನಿಂಗ್ ಮಾಡಿಸಿ ಗಣಕ ಯಂತ್ರದ ಮುಖೇನ ಅರ್ಹತಾ ಪಟ್ಟಿಯನ್ನು ಸಿದ್ದಪಡಿಸುವುದರಿಂದ ಅಭ್ಯರ್ಥಿಗಳು ಉತ್ತರ ಪತ್ರಿಕೆಯ ಮಾಹಿತಿಯನ್ನು ಭರ್ತಿ ಮಾಡುವ ಸಲುವಾಗಿ ಪರೀಕ್ಷೆಗೆ ನಿಗದಿಪಡಿಸಿರುವ ಸಮಯಕ್ಕಿಂತ ಅರ್ಧ ಗಂಟೆ ಮುಂಚಿತವಾಗಿ ಪರೀಕ್ಷಾ ಕೊಠಡಿಗೆ ತಪ್ಪದೇ ಹಾಜರಾಗತಕ್ಕದ್ದು. ಆ ಸಮಯದಲ್ಲಿ ಪರೀಕ್ಷಾ ಮೇಲ್ವಿಚಾರಕರು ಕೆಲವು ಮಾರ್ಗ ಸೂಚನೆಗಳನ್ನು ನೀಡುತ್ತಾರೆ.**

15) ಕರ್ನಾಟಕ ರಾಜ್ಯದ, ಕೇಂದ್ರ ಸರ್ಕಾರದ ಯಾವುದೇ ಸರ್ಕಾರಿ ಹಾಗೂ ಅರೆ ಸರ್ಕಾರಿ ಸಂಸ್ಥೆಯ ಸೇವೆಯಿಂದ ವಜಾ ಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

16) ಸುಳ್ಳು ಮಾಹಿತಿ ಅಥವಾ ನಕಲಿ ಪ್ರಮಾಣ ಪತ್ರ / ದಾಖಲಾತಿಗಳನ್ನು ಸಲ್ಲಿಸಿ ನೌಕರಿ ಪಡೆಯುವುದು ಯಾವುದೇ ಸಂದರ್ಭದಲ್ಲಿ ಕಂಡು ಬಂದಲ್ಲಿ, ಅದೇ ಹಂತದಲ್ಲಿ ಅವರನ್ನು ಯಾವುದೇ ಮುನ್ಸೂಚನೆ ನೀಡದೆ ಅವರ ಅಭ್ಯರ್ಥಿತನವನ್ನು ರದ್ದುಗೊಳಿಸುವುದರ ಜೊತೆಗೆ ಅವರ ವಿರುದ್ಧ ಕಾನೂನು ರೀತಿಯ ಕ್ರಮ ತೆಗೆದುಕೊಳ್ಳಲಾಗುವುದು.

17) ಅಭ್ಯರ್ಥಿಯು ಹುದ್ದೆಗೆ ಅರ್ಜಿ ಸಲ್ಲಿಸಿದ ತಕ್ಷಣ ತಾನು ನಿಯಮ ಮತ್ತು ಅಧಿನಿಯಮಗಳಿಗೆ (Rules & Regulation) ಬದ್ಧನಾಗಿರುತ್ತಾನೆ ಎಂದು ಭಾವಿಸಲಾಗಿರುತ್ತದೆ. ಒಂದು ವೇಳೆ ತಾನು ಸದರಿ ಹುದ್ದೆಗೆ ಆಯ್ಕೆಯಾಗದ ಪಕ್ಷದಲ್ಲಿ ತದನಂತರ ಅದೇ ನಿಯಮಗಳನ್ನು ಪ್ರಶ್ನಿಸಲು ಬರುವುದಿಲ್ಲ.

18) ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳು 1977ರಲ್ಲಿ ನಿರ್ದಿಷ್ಟಗೊಳಿಸಿರುವಂತೆ ಆಯ್ಕೆಯಾದ ಅಭ್ಯರ್ಥಿಯು ನೇಮಕಾತಿ ಆದೇಶ ನೀಡುವ ಮುನ್ನ ಪೂರ್ಣ ಪ್ರಮಾಣದ ವೈದ್ಯಕೀಯ ಪರೀಕ್ಷೆಗೆ ಒಳಗಾಗಬೇಕಾಗುತ್ತದೆ. ವೈದ್ಯಕೀಯ ಪರೀಕ್ಷೆಯಲ್ಲಿ ವಿಫಲರಾದ ಅಭ್ಯರ್ಥಿಗಳನ್ನು ಅನರ್ಹ ಗೊಳಿಸಲಾಗುವುದು.

19) **ದುರ್ನಡತೆ:** ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆ ಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂದು ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ನೇಮಕಾತಿ ಸಮಿತಿಯಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅಭ್ಯರ್ಥಿಯು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ನೇಮಕಾತಿ ಸಮಿತಿ ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಡಿಬಾರ್ ಮಾಡಲಾಗುವುದು.

ಸಹಿ/-
ಅಧ್ಯಕ್ಷರು, ನೇಮಕಾತಿ ಸಮಿತಿ,
ಬೆಂಗಳೂರು.

**(ಪ.ಜಾ/ಪ.ಪಂ ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ-ಡಿ**

(ನಿಯಮ 3ಎ (2) (3) ನೋಡಿ)

**ಅನುಸೂಚಿತ ಜಾತಿ ಅಥವಾ ಅನುಸೂಚಿತ ಬುಡಕಟ್ಟುಗಳಿಗೆ (ಪ.ಜಾ /ಪ.ಪಂ) ಸೇರಿದ ಅಭ್ಯರ್ಥಿಗಳಿಗೆ ನೀಡುವ ಪ್ರಮಾಣ ಪತ್ರಗಳ ನಮೂನೆ**

**ಪ್ರಮಾಣ ಪತ್ರ**

.................................................................. ರಾಜ್ಯದ / ಕೇಂದ್ರಾಡಳಿತ ಪ್ರದೇಶದ * ............................. ಜಿಲ್ಲೆಯ/ ವಿಭಾಗದ .......................................... ಗ್ರಾಮ / ಪಟ್ಟಣದ * ನಿವಾಸಿಯಾದ ಶ್ರೀ / ಶ್ರೀಮತಿ .............. ಎಂಬುವವರ ಮಗ / ಮಗಳಾದ ಶ್ರೀ / ಶ್ರೀಮತಿ ................................................ ಇವರು ಅನುಸೂಚಿತ ಜಾತಿ / ಅನುಸೂಚಿತ ಬುಡಕಟ್ಟು * ಎಂದು ಮಾನ್ಯ ಮಾಡಲಾಗಿರುವ ಜಾತಿ / ಬುಡಕಟ್ಟಿಗೆ * ಸೇರಿರುತ್ತಾರೆಂದು ಪ್ರಮಾಣಿಕರಿಸಲಾಗಿದೆ.

* ಸಂವಿಧಾನ (ಅನುಸೂಚಿತ ಜಾತಿಗಳು) ಆದೇಶ, 1950
* ಸಂವಿಧಾನ (ಅನುಸೂಚಿತ ಬುಡಕಟ್ಟುಗಳು) ಆದೇಶ, 1950
* ಸಂವಿಧಾನ (ಅನುಸೂಚಿತ ಜಾತಿ) (ಕೇಂದ್ರಾಡಳಿತ ಪ್ರದೇಶಗಳು) ಆದೇಶ, 1950
* ಸಂವಿಧಾನ (ಅನುಸೂಚಿತ ಬುಡಕಟ್ಟುಗಳು) (ಕೇಂದ್ರಾಡಳಿತ ಪ್ರದೇಶಗಳು) ಆದೇಶ, 1951

(ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ ಪಟ್ಟಿ (ಮಾರ್ಪಾಡು) ಆದೇಶ 1956, ಮುಂಬಯಿ ರಾಜ್ಯ ಪುನರ್ ರಚನಾ ಅಧಿ ನಿಯಮ, 1960, ಪಂಜಾಬ್ ರಾಜ್ಯ ಪುನರ್ ರಚನಾ ಅಧಿನಿಯಮ, 1966, ಹಿಮಾಚಲ ಪ್ರದೇಶ ರಾಜ್ಯ ಅಧಿನಿಯಮ, 1970 ಮತ್ತು ಈಶಾನ್ಯ ಪ್ರದೇಶಗಳ (ಪುನರ್ ರಚನಾ ಅಧಿನಿಯಮ, 1971ರ ಮೂಲಕ ತಿದ್ದುಪಡಿಯಾದಂತೆ).

* ಸಂವಿಧಾನ
* ಸಂವಿಧಾನ (ಜಮ್ಮು ಮತ್ತು ಕಾಶ್ಮೀರ) ಅನುಸೂಚಿತ ಜಾತಿಗಳ ಆದೇಶ, 1956
* ಅನುಸೂಚಿತ ಜಾತಿ ಮತ್ತು ಅನುಸೂಚಿತ ಬುಡಕಟ್ಟುಗಳ (ತಿದ್ದುಪಡಿ) ಅಧಿನಿಯಮ, 1976ರ ಮೂಲಕ ತಿದ್ದುಪಡಿಯಾದಂತೆ ಸಂವಿಧಾನ (ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳ) ಅನುಸೂಚಿತ ಬುಡಕಟ್ಟುಗಳ ಆದೇಶ, 1959.
* ಸಂವಿಧಾನ (ದಾದರ್ ಮತ್ತು ನಗರ ಹವೇಲಿ) ಅನುಸೂಚಿತ ಜಾತಿಗಳ ಆದೇಶ, 1962
* ಸಂವಿಧಾನ (ಪಾಂಡಿಚೇರಿ) ಅನುಸೂಚಿತ ಜಾತಿಗಳ ಆದೇಶ, 1964
* ಸಂವಿಧಾನ (ಅನುಸೂಚಿತ ಬುಡಕಟ್ಟುಗಳ) (ಉತ್ತರ ಪ್ರದೇಶ) ಆದೇಶ', 1967
* ಸಂವಿಧಾನ (ಗೋವಾ, ದಮನ್ ಮತ್ತು ದೀವ್) ಅನುಸೂಚಿತ ಜಾತಿ / ಬುಡಕಟ್ಟುಗಳ ಆದೇಶ 1988
* ಸಂವಿಧಾನ (ನಾಗಾಲ್ಯಾಂಡ್) ಅನುಸೂಚಿತ ಬುಡಕಟ್ಟುಗಳ ಆದೇಶ

2. ಶ್ರೀ / ಶ್ರೀಮತಿ / ಕುಮಾರಿ* .................................................................................................. ಮತ್ತು / ಅಥವಾ ಅವನ* / ಅವಳ* ಕುಟುಂಬವು ........................................................................ ರಾಜ್ಯ / ಕೇಂದ್ರಾಡಳಿತ ಪ್ರದೇಶದ ............................................ ಜಿಲ್ಲಾ / ವಿಭಾಗದ .......................... ಗ್ರಾಮ / ಪಟ್ಟಣದ ಸಾಮಾನ್ಯ ನಿವಾಸಿ (ಗಳು)

ಸಹಿ ................................................

ತಹಶೀಲ್ದಾರರು ................................................

ಸ್ಥಳ : ಪದನಾಮ

ದಿನಾಂಕ : ಕಛೇರಿಯ ಮೊಹರಿನೊಂದಿಗೆ

**ರಾಜ್ಯ / ಕೇಂದ್ರಾಡಳಿತ ಪ್ರದೇಶ***

***ಅನ್ವಯವಾಗದಿರುವ ಪದಗಳನ್ನು ದಯವಿಟ್ಟು ಬಿಟ್ಟು ಬಿಡಿ / ಹೊಡೆದು ಹಾಕಿ**

**ಸೂಚನೆ:** ಇಲ್ಲಿ ಉಪಯೋಗಿಸಿದ **"ಸಾಮಾನ್ಯ ನಿವಾಸಿಗಳೂ"** ಎಂಬ ಪದಾವಳಿಯು ಪ್ರಜಾ ಪ್ರಾತಿನಿಧ್ಯ ಅಧಿನಿಯಮ, 1950ರ 20ನೇ ಪ್ರಕರಣದಲ್ಲಿರುವ ಅರ್ಥವನ್ನೇ ಹೊಂದಿರುತ್ತದೆ.

ಭಾರತ ಸರ್ಕಾರದ ಪತ್ರ ಸಂಖ್ಯೆ. ಬಿಸಿ 12028 / 2/ 76–ಎಸ್‌ಸಿಟಿ–1 ಗೃಹ ಮಂತ್ರಾಲಯದ ಅನುಸಾರವಾಗಿ, ಅಂಥ ಪ್ರಮಾಣ ಪತ್ರಗಳನ್ನು ನೀಡಲು ಸಕ್ಷಮವಾಗಿರುವುದಕ್ಕಾಗಿ, ಭಾರತ ಸರ್ಕಾರದ (ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ) ಪತ್ರ ಸಂಖ್ಯೆ 13.02.74 ಇಎಸ್‌ಟಿ (ಎಸ್‌ಸಿಟಿ) ದಿನಾಂಕ 5ನೇ ಆಗಸ್ಟ್ 1975ರಲ್ಲಿ ನಮೂದಿಸಿದ ಪ್ರಾಧಿಕಾರಿಯು, ರಾಷ್ಟ್ರಪತಿಗಳು ಸಂಬಂಧಪಟ್ಟ ಆದೇಶದ ಅಧಿಸೂಚನೆಯನ್ನು ಹೊರಡಿಸಿದ ಸಮಯದಲ್ಲಿ ಪ್ರಮಾಣ ಪತ್ರಕ್ಕಾಗಿ ಅರ್ಜಿ ಸಲ್ಲಿಸಿದ ವ್ಯಕ್ತಿಯು, ತನ್ನ ಖಾಯಂ ವಾಸ ಸ್ಥಳವನ್ನು ಹೊಂದಿದ್ದ ಸ್ಥಳಕ್ಕೆ ಸೇರಿದವರೊಬ್ಬರಾಗಿರತಕ್ಕದ್ದು. ಅದೇ ರೀತಿಯಲ್ಲಿ, ಒಂದು ತಾಲ್ಲೂಕಿನ ರೆವಿನ್ಯೂ ಪ್ರಾಧಿಕಾರಿಯು ಇನ್ನೊಂದು ತಾಲ್ಲೂಕಿಗೆ ಸೇರಿದ ವ್ಯಕ್ತಿಗಳಿಗೆ ಸಂಬಂಧಪಟ್ಟ ಪ್ರಮಾಣ ಪತ್ರವನ್ನು ನೀಡಲು ಸಕ್ಷಮ ಪ್ರಾಧಿಕಾರಿಯಾಗುವುದಿಲ್ಲ.

– – – – –

**(ಪ್ರವರ್ಗ– 1ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ–ಇ**

(ನಿಯಮ 3ಎ (2) (3) ನೋಡಿ)

**ಹಿಂದುಳಿದ ವರ್ಗಗಳಿಗೆ (ಪ್ರ.ವರ್ಗ–1) ಸೇರಿದ ಅಭ್ಯರ್ಥಿಗೆ ನೀಡುವ ಪ್ರಮಾಣ ಪತ್ರ**

.................................................................................................. ಗ್ರಾಮ / ಪಟ್ಟಣದ / ನಗರ ನಿವಾಸಿಯಾದ ಶ್ರೀ / ಶ್ರೀಮತಿ ........................................................................................................ ಇವರ ಮಗ / ಮಗಳು / ಪತ್ನಿ / ಪತಿಯಾದ ಶ್ರೀ / ಶ್ರೀಮತಿ ........................................................................................ ಇವರು ಹಿಂದುಳಿದ ವರ್ಗಗಳ (ಪ್ರವರ್ಗ) ................................................................ ಜಾತಿಯ ............................................ ಉಪ ಜಾತಿಗೆ ಸೇರಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ತಹಶೀಲ್ದಾರರು

ದಿನಾಂಕ : .......................... ತಾಲ್ಲೂಕು

ಕಛೇರಿಯ ಮೊಹರು

**(ಪ್ರವರ್ಗ – 2ಎ, 2ಬಿ, 3ಎ, 3ಬಿ ಗೆ ಸೇರಿದ ಅಭ್ಯರ್ಥಿಗಳಿಗೆ ಮಾತ್ರ)**

**ನಮೂನೆ– ಎಫ್**

(ನಿಯಮ 3ಎ (2) (3)ನ್ನು ನೋಡಿ)

**ಹಿಂದುಳಿದ ವರ್ಗಗಳಿಗೆ (2ಎ, 2ಬಿ, 3ಎ, 3ಬಿ) ಸೇರಿದ ಅಭ್ಯರ್ಥಿಗಳಿಗೆ ನೀಡುವ ಆದಾಯ ಮತ್ತು ಜಾತಿ ಪ್ರಮಾಣ ಪತ್ರ**

....................................................ರಲ್ಲಿ ವಾಸವಾಗಿರುವ ಶ್ರೀ/ ಶ್ರೀಮತಿ ............................................ ಇವರ ಮಗ / ಮಗಳು / ಪತಿ / ಪತ್ನಿಯಾದ ಶ್ರೀ/ಶ್ರೀಮತಿ/ಕುಮಾರಿ ...................................... ಇವರು ಮತ್ತು ಆತನ / ಅವಳ ತಂದೆ / ತಾಯಿ / ಪೋಷಕರು/ಪತ್ನಿ/ಪತಿಯು, ಸರ್ಕಾರಿ ಆದೇಶಗಳ ಸಂಖ್ಯೆ. ಎಸ್‌ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ 30.03.2002ರಲ್ಲಿ ನಿರ್ದಿಷ್ಟ ಪಡಿಸಿದ ಮೇಲುಸ್ತರದ (ಕ್ರಿಮಿ ಲೇಯರ್) ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು;

ಅಭ್ಯರ್ಥಿಯಾಗಲಿ ಅಥವಾ ಆತನ / ಆಕೆಯ ತಂದೆ ತಾಯಿ/ಪೋಷಕರಾಗಲಿ / ಪತ್ನಿ / ಪತಿಯಾಗಲಿ, ಸರ್ಕಾರದ ಸೇವೆಯಲ್ಲಿ 1ನೇ ದರ್ಜೆಯ ಅಥವಾ 2ನೇ ದರ್ಜೆಯ ಅಧಿಕಾರಿಯಾಗಿಲ್ಲವೆಂದು ;

ಅಥವಾ

ಸಾರ್ವಜನಿಕ ವಲಯ ಉದ್ಯಮದಲ್ಲಿ ತತ್ಸಮಾನವಾದ ಹುದ್ದೆಯನ್ನು ಹೊಂದಿರುವುದಿಲ್ಲ ;

ಅಥವಾ

ಖಾಸಗಿ ನಿಯೋಜಕರ ಕೈಕೆಳಗೆ, 2ನೇ ದರ್ಜೆಯ ಅಧಿಕಾರಿಯ ಸಂಬಳಕ್ಕಿಂತ (ವೇತನ ಶ್ರೇಣಿ ರೂ. 6000–12000/– ಪ್ರಾರಂಭಿಕ ಹಂತ) ಕಡಿಮೆಯಲ್ಲದ ಸಂಬಳವನ್ನು ಪಡೆಯುವ ನೌಕರನಾಗಿಲ್ಲವೆಂದು

ಅಥವಾ

ಆತನ/ಆಕೆಯ ತಂದೆ ತಾಯಿ/ಪೋಷಕರು/ಪತ್ನಿ/ಪತಿಯ ಆದಾಯವು ಎರಡು ಲಕ್ಷ ಮೀರುವುದಿಲ್ಲವೆಂದು ;

ಅಥವಾ

ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರಲ್ಲಿ ನಿಗದಿಪಡಿಸಿರುವಂತೆ ಆತನ/ಆಕೆಯ ತಂದೆ ತಾಯಿ/ಪೋಷಕರು/ಪತ್ನಿ/ಪತಿಯು ಮಾರಾಟ ತೆರಿಗೆದಾರನಲ್ಲ ಅಥವಾ ಆತನ/ಆಕೆಯ ತಂದೆ ತಾಯಿ/ಪೋಷಕ/ಪತ್ನಿ/ಪತಿಯು ಅಥವಾ ಇವರಿಬ್ಬರೂ 10 ಯುನಿಟ್‌ಗಿಂತ ಹೆಚ್ಚಿನ ಕೃಷಿ ಭೂಮಿ ಅಥವಾ 25 ಎಕರೆಗಳಿಗಿಂತ ಹೆಚ್ಚಿನ ಪ್ಲಾಂಟೇಶನ್ ಭೂಮಿಯನ್ನು ಹೊಂದಿರುವುದಿಲ್ಲವೆಂದು ಪ್ರಮಾಣಿಕರಿಸಲಾಗಿದೆ. ಸರ್ಕಾರಿ ಆದೇಶ ಸಂಖ್ಯೆ. ಎಸ್‌ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ 30.03.2002ರ ಅನ್ವಯ ಶ್ರೀ/ಶ್ರೀಮತಿ/ಕುಮಾರಿ.................................. ಇವರು ....................................... ಜಾತಿಗೆ ......................................... ಸೇರಿದ ಉಪಜಾತಿಯವರಾಗಿದ್ದು ಸರ್ಕಾರಿ ಆದೇಶ ಸಂಖ್ಯೆ. ಎಸ್‌ಡಬ್ಲ್ಯೂಡಿ 225 ಬಿಸಿಎ 2000, ದಿನಾಂಕ 30.03.2002ರ ಅನ್ವಯ ಹಿಂದುಳಿದ ವರ್ಗಗಳ ಪ್ರವರ್ಗ ................................ (2ಎ, 2ಬಿ, 3ಎ, 3ಬಿ) ಸೇರಿರುತ್ತಾರೆ.

ಸ್ಥಳ : ತಹಶೀಲ್ದಾರರು

ದಿನಾಂಕ : .......................... ತಾಲ್ಲೂಕು

ಕಛೇರಿಯ ಮೊಹರು

## ನಮೂನೆ–1

## ಜನರಲ್ ಮೆರಿಟ್ ಅಭ್ಯರ್ಥಿಗಳು ಮೇಲುಸ್ತರಕ್ಕೆ ಸೇರಿಲ್ಲವೆಂದು, ದೃಢೀಕರಿಸಿ ಗ್ರಾಮೀಣ ಮೀಸಲಾತಿಯನ್ನು ಕೋರಲು ಸಲ್ಲಿಸಬೇಕಾದ ಪ್ರಮಾಣ ಪತ್ರ

(ಜನರಲ್ ಮೆರಿಟ್ ಅಭ್ಯರ್ಥಿಗಳು ಭರ್ತಿ ಮಾಡಬೇಕಾದ ನಮೂನೆ)

ಇವರಿಗೆ:
ತಹಶೀಲ್ದಾರರು,
..................... ತಾಲ್ಲೂಕು,
..................... ಜಿಲ್ಲೆ.

ಮಾನ್ಯರೆ,

ಶ್ರೀ / ಶ್ರೀಮತಿ ....................................................... ಎಂಬುವವರ ಮಗ/ಮಗಳು/ಪತಿ/ಪತ್ನಿ............................. ಆದ ನಾನು ಮೇಲುಸ್ತರದಲ್ಲಿ (Creamy Layer) ಬರುವುದಿಲ್ಲವೆಂದು ನೇರ ನೇಮಕಾತಿಯಲ್ಲಿ ಗ್ರಾಮೀಣ ಅಭ್ಯರ್ಥಿ ಮೀಸಲಾತಿಯನ್ನು ಪಡೆಯುವುದಕ್ಕಾಗಿ ಪ್ರಮಾಣ ಪತ್ರವನ್ನು ಪಡೆಯಲು ತಮ್ಮಲ್ಲಿ ಈ ಕೆಳಕಂಡ ಮಾಹಿತಿಗಳನ್ನು ಒದಗಿಸುತ್ತಾ ಕೋರುತ್ತೇನೆ.

1. ಅಭ್ಯರ್ಥಿಯ ಹೆಸರು ಮತ್ತು ಉದ್ಯೋಗ :
2. ಅಭ್ಯರ್ಥಿಯ ಸ್ವಂತ ಸ್ಥಳ ಗ್ರಾಮ :
   ತಾಲ್ಲೂಕು :
   ಜಿಲ್ಲೆ :
3. ಅಭ್ಯರ್ಥಿಯು ಹುಟ್ಟಿದ ದಿನಾಂಕ ವಯಸ್ಸು ಮತ್ತು ಹುಟ್ಟಿದ ಸ್ಥಳ :
4. ಅಭ್ಯರ್ಥಿಯ ತಂದೆ/ತಾಯಿ/ಪೋಷಕರ ಪತಿಯ/ಪತ್ನಿಯ ಹೆಸರು ಮತ್ತು ಉದ್ಯೋಗ:
   (ಉದ್ಯೋಗವು ಸರ್ಕಾರಿ/ಅರೆ ಸರ್ಕಾರಿ/ಸಾರ್ವಜನಿಕ ಉದ್ಯಮ/ಖಾಸಗಿ)
5. ಅಭ್ಯರ್ಥಿಯ ಪ್ರಸ್ತುತ ವಿಳಾಸ :
   (ಸ್ಪಷ್ಟವಾಗಿ ನಮೂದಿಸುವುದು)
6. ಅಭ್ಯರ್ಥಿಯ ಖಾಯಂ ವಿಳಾಸ :

7. ಅಭ್ಯರ್ಥಿಯ ಶಾಲಾ ಶಿಕ್ಷಣದ ವ್ಯಾಸಂಗ ಮಾಡಿದ ಶಾಲೆಗಳ ವಿವರಗಳು
ಪ್ರಾಥಮಿಕ
ಮಾಧ್ಯಮಿಕ
ಪ್ರೌಢ
8. ಅಭ್ಯರ್ಥಿಯ ಹಾಗೂ ಅಭ್ಯರ್ಥಿಯ ತಂದೆ/ತಾಯಿ/ಪೋಷಕರ (ತಂದೆ/ತಾಯಿ ಜೀವಂತವಿಲ್ಲದಿದ್ದರೆ) ಇವರ ಒಟ್ಟು ವಾರ್ಷಿಕ ಆದಾಯ ಎಲ್ಲಾ ಮೂಲಗಳಿಂದ :
1) ವೇತನ ಶ್ರೇಣಿ
2) ಜಮೀನಿನ ವಿವರ
3) ಇತರ ಮೂಲಗಳು
9. ಆದಾಯ ತೆರಿಗೆ ಪಾವತಿದಾರರೇ ?
10. ಸಂಪತ್ತು ತೆರಿಗೆ ಪಾವತಿದಾರರೇ ?
11. ಮಾರಾಟ ತೆರಿಗೆ ಪಾವತಿದಾರರೇ ?

**ಪ್ರಮಾಣೀಕೃತ ಘೋಷಣೆ**

ಈ ಮೇಲೆ ನನ್ನಿಂದ ಒದಗಿಸಿದ ಮಾಹಿತಿ/ವಿವರಣೆಯು ನಾನು ತಿಳಿದಿರುವಷ್ಟರ ಮಟ್ಟಿಗೆ ಸತ್ಯವೆಂದು ಶ್ರದ್ಧಾಪೂರ್ವಕವಾಗಿ ದೃಢೀಕರಿಸುತ್ತೇನೆ ಮತ್ತು ಘೋಷಿಸುತ್ತೇನೆ.

ಸ್ಥಳ : ತಮ್ಮ ವಿಧೇಯ
ದಿನಾಂಕ: (ಅಭ್ಯರ್ಥಿಯ ಸಹಿ)

ಮೇಲೆ ಒದಗಿಸಲಾದ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತಾ ಈ ಮಾಹಿತಿಗಳು ಅಸತ್ಯವೆಂದು ದೃಢಪಟ್ಟಲ್ಲಿ ಅಪರಾಧ ವಿಚಾರಣೆಗೆ ಬದ್ಧನಾಗಿರುತ್ತೇನೆ.

ಸ್ಥಳ : ತಂದೆ/ತಾಯಿ/ಪೋಷಕರ ಸಹಿ
ದಿನಾಂಕ : (ತಂದೆ/ತಾಯಿ ಜೀವಂತವಿಲ್ಲದಿದ್ದರೆ)
(ಹೆಂಡತಿ/ಗಂಡ/ಇವರ ಸಹಿ)

**ಸ್ಥಳೀಯ ಇಬ್ಬರು ಸಾಕ್ಷಿದಾರರು**

ಅಭ್ಯರ್ಥಿಯ ಮತ್ತು ಅವರ ತಂದೆ/ತಾಯಿ/ಪೋಷಕರು/ಪತಿ/ಪತ್ನಿ ಇವರನ್ನು ಹಾಗೂ ಇವರ ಸಹಿಯನ್ನು ಗುರುತಿಸುತ್ತೇವೆ.

ಸಾಕ್ಷಿದಾರರ ಸಹಿ 1)
(ಪೂರ್ಣ ವಿಳಾಸದೊಂದಿಗೆ) 2)

**ಪರಿಶೀಲನಾ ಪ್ರಮಾಣ ಪತ್ರ**

1. ಶ್ರೀ/ಶ್ರೀಮತಿ.............................................................................. ಎಂಬುವವರ ಮಗ/ಮಗಳು/ಪತಿ/ಪತ್ನಿ/ಶ್ರೀ/ಶ್ರೀಮತಿ/ಕುಮಾರಿ................................ ಎಂಬುವವರು ಕರ್ನಾಟಕ ರಾಜ್ಯದ ................................ ಜಿಲ್ಲೆಯ ವಿಭಾಗ ............................ ಗ್ರಾಮ/ಪಟ್ಟಣ/ನಗರದಲ್ಲಿ ಸಾಮಾನ್ಯ ನಿವಾಸಿಯಾಗಿದ್ದಾರೆ ಮತ್ತು ಇವರು ಜನರಲ್ ಮೆರಿಟ್ ವರ್ಗಕ್ಕೆ ಸೇರಿದವರಾಗಿರುತ್ತಾರೆ.

2. ಶ್ರೀ/ಶ್ರೀಮತಿ/ಕುಮಾರಿ ........................................................ ಇವರ ತಂದೆ/ತಾಯಿ/ಪೋಷಕರು ಸರ್ಕಾರಿ ಆದೇಶ ಸಂಖ್ಯೆ ಎಸ್‌ಡಬ್ಲ್ಯೂಡಿ 251 ಬಿಸಿಎ 94, ಬೆಂಗಳೂರು, ದಿನಾಂಕ 31.01.1995 ರನ್ವಯ ಜನರಲ್ ಮೆರಿಟ್ ವರ್ಗದ ಮೇಲುಸ್ತರದಲ್ಲಿ (Creamy Layer) ಬರುವುದಿಲ್ಲವೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ತಹಶೀಲ್ದಾರರು
ದಿನಾಂಕ : ......................... ತಾಲ್ಲೂಕು
ಕಛೇರಿಯ ಮೊಹರು

**ಸೂಚನೆ–1:** ಇದರಲ್ಲಿ ಉಪಯೋಗಿಸಲಾದ **"ಸಾಮಾನ್ಯ ನಿವಾಸಿ"** ಎಂಬ ಪದವು 1950ರ ಜನತಾ ಪ್ರಾತಿನಿಧ್ಯ ಕಾಯ್ದೆಯ 20ನೇ ಅನುಚ್ಛೇದದಲ್ಲಿನ ಅರ್ಥವನ್ನು ಹೊಂದಿರುತ್ತದೆ.

**ಸೂಚನೆ–2:** ಪರಿಶೀಲನಾ ಪ್ರಮಾಣ ಪತ್ರ ನೀಡುವ ಅಧಿಕೃತ ಅಧಿಕಾರಿಯು ಸರ್ಕಾರಿ ಆದೇಶ ಸಂಖ್ಯೆ ಎಸ್‌ಡಬ್ಲ್ಯೂಡಿ 251 ಬಿಸಿಎ 94, ಬೆಂಗಳೂರು, ದಿನಾಂಕ 31.01.1995 ರನ್ವಯ ಮೇಲುಸ್ತರ (Creamy Layer) ದವರನ್ನು ಗುರುತಿಸಲು ನಿಗದಿಪಡಿಸಲಾಗಿರುವ ಅಂಶಗಳನ್ನು ವಿವರವಾಗಿ ಖಚಿತಪಡಿಸಿಕೊಂಡ ನಂತರವೇ ಪ್ರಮಾಣ ಪತ್ರ ನೀಡತಕ್ಕದ್ದು

ನಮೂನೆ – 2

**ಗ್ರಾಮೀಣ ಅಭ್ಯರ್ಥಿ ಪ್ರಮಾಣ ಪತ್ರ**

ಶ್ರೀ / ಶ್ರೀಮತಿ ........................................................................ ರವರ ಮಗ/ಮಗಳು/ಪತ್ನಿ/ಶ್ರೀ/ಶ್ರೀಮತಿ/ಕುಮಾರಿ ................................................. ಜಿಲ್ಲೆ ............................ ತಾಲ್ಲೂಕು ............................. ಗ್ರಾಮದಲ್ಲಿ .......................... ವಾಸವಾಗಿರುವ ಇವರು ಒಂದನೇ ತರಗತಿಯಿಂದ ................................. ತರಗತಿಯವರೆಗೆ ...................................... ಜಿಲ್ಲೆ ............................... ತಾಲ್ಲೂಕು ............................. ಪಟ್ಟಣ ............................................... ಶಾಲೆಯಲ್ಲಿ ವ್ಯಾಸಂಗ ಮಾಡಿ ............................. ವರ್ಷ ನಡೆದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಈ ಶಾಲೆಯ ಅಭ್ಯರ್ಥಿಯು ವ್ಯಾಸಂಗ ಮಾಡಿದ ಅವಧಿಯಲ್ಲಿ ಕರ್ನಾಟಕದ ಪೌರ ನಿಗಮಗಳ ಅಧಿನಿಯಮ, 1976 ಅಥವಾ ಕರ್ನಾಟಕ ಪೌರ ಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ನಿರ್ದಿಷ್ಟ ಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆ ಹಂತದಲ್ಲಿರುವ ಪ್ರದೇಶಗಳ ಹೊರತಾದ ಪ್ರದೇಶದಲ್ಲಿತ್ತು.

ಸ್ಥಳ : ಮುಖ್ಯೋಪಾಧ್ಯಾಯರ ಸಹಿ

ದಿನಾಂಕ : ಮತ್ತು ಸಂಸ್ಥೆಯ ಪೂರ್ಣ ವಿಳಾಸವುಳ್ಳ ಮೊಹರು

ಮೇಲುರುಜು

ಕ್ಷೇತ್ರ ಶಿಕ್ಷಣಾಧಿಕಾರಿ

~ ~ ~ ~ ~

ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 44 ಸೇನೆನಿ 2001 ದಿನಾಂಕ 27–07–2001

**ನಮೂನೆ–3**

**ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿ**

ಶ್ರೀ/ಶ್ರೀಮತಿ ........................................................................................ ಎಂಬುವವರ ಮಗ/ಮಗಳು/ಪತ್ನಿ/ಶ್ರೀಮತಿ/ ಕುಮಾರಿ ................................................... ಜಿಲ್ಲೆ ............................. ತಾಲ್ಲೂಕು ............................. ಗ್ರಾಮದಲ್ಲಿ ವಾಸವಾಗಿರುವ ಇವರು : ಇವರ ಕುಟುಂಬದವರ ಅವಲಂಬಿತರಾಗಿದ್ದ ಈ ಕೆಳಕಂಡ ಆಸ್ತಿಯನ್ನು ........................................................... ಯೋಜನೆಗಾಗಿ ............................. ಇಸವಿಯಂದು ಸ್ವಾಧೀನಪಡಿಸಿಕೊಳ್ಳಲಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸಿದೆ :–

(i) ** ವಾಸಿಸುವ ಮನೆ ಮತ್ತು ತಾವು ಅವಲಂಬಿತರಾಗಿದ್ದ ಅವರ ಕೃಷಿ ಭೂಮಿಯ ಅರ್ಧದಷ್ಟು.

(ii) ** ಯೋಜನೆಗೆ ಮೊದಲು ಭೂಮಿಯನ್ನು ಹೊಂದಿರದೆ : ಯೋಜನೆಯಿಂದ ತಾವು ವಾಸಿಸುವ ಮನೆ:

(iii) ** ತಾವು ಅವಲಂಬಿತರಾಗಿದ್ದ ತಮ್ಮ ಕೃಷಿ ಭೂಮಿಯ ಅರ್ಧದಷ್ಟು ಅಥವಾ ಅದಕ್ಕಿಂತ ಕಡಿಮೆ ಕೃಷಿ ಭೂಮಿ:

(iv) ** ಇತರ ಇನ್ನಾವುದೇ ಪ್ರಕರಣದಲ್ಲಿ ಯೋಜನೆಯಿಂದ ನಿರ್ವಸಿತರಾದವರು.

ಸ್ಥಳ : ಸಹಿ/– ತಹಶೀಲ್ದಾರರು

ದಿನಾಂಕ : ........................ ತಾಲ್ಲೂಕು

ಕಛೇರಿಯ ಮೊಹರು

(** ಅನ್ವಯವಾಗುವ ಐಟಂನ್ನು ಮಾತ್ರ ಪ್ರಮಾಣ ಪತ್ರದಲ್ಲಿ ನಮೂದಿಸತಕ್ಕದ್ದು.)

**ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರ**

ಶ್ರೀ / ಶ್ರೀಮತಿ ........................................................................................ ರವರ ಮಗ/ಮಗಳು/ಪತ್ನಿ/ಶ್ರೀಮತಿ/ ಕುಮಾರಿ ........................................... ಜಿಲ್ಲೆ ........................... ತಾಲ್ಲೂಕು ............................ ಗ್ರಾಮದಲ್ಲಿ ...................... ವಾಸವಾಗಿರುವ ಇವರು ........................... ನೇ ತರಗತಿಯಿಂದ ........................................ ನೇ ತರಗತಿಯವರೆಗೆ ............................. ಶೈಕ್ಷಣಿಕ ವರ್ಷದಿಂದ ............................. ಶೈಕ್ಷಣಿಕ ವರ್ಷದವರೆಗೆ............................. ಶಾಲೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ.

ಸ್ಥಳ : ಮುಖ್ಯೋಪಾಧ್ಯಾಯರ ಸಹಿ

ದಿನಾಂಕ : ಮತ್ತು ಸಂಸ್ಥೆಯ ಪೂರ್ಣ ವಿಳಾಸವುಳ್ಳ ಮೊಹರು

ಮೇಲು ರುಜು

ಪಿ.ಆರ್.492 ಕ್ಷೇತ್ರ ಶಿಕ್ಷಣಾಧಿಕಾರಿ

ಕಛೇರಿಯ ಮೊಹರು.

